ಮನೋಹರ ಗ್ರಂಥಮಾಲೆಯ ಬಿಡಿಮುತ್ತು

# ಗಂಗಾವತರಣ

ಅಂಬಿಕಾತನಯದತ್ತ

ಮೊದಲ ಆವೃತ್ತಿ

ಅಗಸ್ಟ ೧೯೫೨

ಮನೋಹರ ಗ್ರಂಥಪ್ರಕಾಶನ ಸಮಿತಿ ಧಾರವಾಡ

ಸಾಹಿತ್ಯವಿಷಯದಲ್ಲಿ ಸಲಹೆಗಾರರು :

ಶ್ರೀ. ದ. ರಾ. ಬೇಂದ್ರೆ ಎಂ. ಎ.

ಶ್ರೀ. ವಿ. ಕೃ. ಗೋಕಾಕ ಬಿ. ಎ. ( ಆಕ್ಸಫರ್ಡ )

ಶ್ರೀ. ರಂ. ಶ್ರೀ. ಮುಗಳಿ ಎಂ. ಎ. ಬಿಟಿ.



ಬೆಲೆ :

| ಸುಂದರ ಪ್ರತಿ | ಸಾದಾ ಪ್ರತಿ |
|---|---|
| ೩—೮—೦ | ೨—೦—೦ |



ಪ್ರಕಾಶಕರು :
ಜಿ. ಬಿ. ಜೋಶಿ
ಮನೋಹರ ಗ್ರಂಥಮಾಲಾ
ಧಾರವಾಡ.

ಮುದ್ರಕರು :
ಎಂ. ಎ. ಕಾಮತ ಬಿ. ಎಸ್ಸಿ.
ಹಿಂದಮಾತಾ ಮುದ್ರಣಾಲಯ,
ಧಾರವಾಡ.

# ಮುನ್ನುಡಿ . . . .

ಈ ಸಂಗ್ರಹ ಪ್ರಕಟವಾಗಿ ಬಹಳ ವರ್ಷವಾಗಬೇಕಾಗಿತ್ತು. ಹಾಗಾಗ ಲಿಲ್ಲ. ಆಗ ಜೀವಿಸಿದ್ದ ನನ್ನ ಹಿರಿಯ ಮಗ ಚಿ. ರಾಮಚಂದ್ರ ಇದರ ಅರ್ಧ ಪ್ರತಿ ಮಾಡಿದ. ಮುಂದೆ ಅವನು ಗತಿಸಿದ ಮೇಲೆ ಈ ಸಂಗ್ರಹ ಅರ್ಧ ಸ್ಥಿತಿಯಲ್ಲಿಯೇ ಉಳಿದಿತು. ನಾನೇ ಇದನ್ನು ಪ್ರಕಟಿಸಬೇಕೆಂದೂ ಪ್ರಯತ್ನ ಮಾಡಿದೆ. ಪ್ರಕಟನೆ ಕೊಟ್ಟೆ. ಇಡೀ ಕರ್ನಾಟಕದಿಂದ ಮುಂಗಾಣಿಕೆ ಎಂದು ಎಂಟು-ಹತ್ತು ಜನರಿಂದ ಮಾತ್ರ ಹಣ ಬಂತು. ಆ ಮಿತ್ರರ ಹಣ ಅವರಿಗೆ ತಿರುಗಿ ಸಲ್ಲಿಸಿದ್ದೇನೆ. ಆದರೂ ನನ್ನ ಧನ್ಯವಾದಗಳು. ಈಗ ಈ ಸಂಗ್ರಹವನ್ನು ನನ್ನ ಮಿತ್ರರೂ ನನ್ನ ಬೇರೆ ಪುಸ್ತಕಗಳನ್ನು ಪ್ರಕಾಶಿಸಿದವರೂ ಆದ ಶ್ರೀ. ಗೋವಿಂದಾಚಾರ್ಯ ಜೋಶಿ (ಜಿ. ಬಿ. ಜೋಶಿ)ಯವರೇ ಪ್ರಕಟಿಸುತ್ತಿದ್ದಾರೆ. ಇದಕ್ಕಾಗಿ ಪ್ರತಿಯನ್ನು ನನ್ನ ತರುಣ ಮಿತ್ರರು ಚಿ. ವಸಂತ ದಿವಾಣಜಿ ಇವರು ಮಾಡಿದ್ದಾರೆ. ಈ ಪ್ರಕಟಣೆ ಬೇಗ ಬರಬೇಕೆಂದು ಒತ್ತಾಯಪಡಿಸಿದ ಮಿತ್ರರು ಅನೇಕರು. ಅವರೆಲ್ಲರಿಗೂ ನಾನು ಋಣಿ. ಇದನ್ನು ಮುದ್ದಾಗಿ ಮುದ್ರಿಸಿದವರಿಗೂ, ತಿದ್ದುಪಡಿ ಮೊದಲಾದವುಗಳಲ್ಲಿ ಸಹಾಯ ಮಾಡಿದ ಮಿತ್ರರಿಗೂ ನಾನು ಕೃತಜ್ಞನಾಗಿದ್ದೇನೆ.

ಇದರಲ್ಲಿ ಬಂದ ಕೆಲವು ಕವನಗಳು ಈ ಪೂರ್ವದಲ್ಲಿ ಅಪ್ರಕಾಶಿತವಾದವುಗಳು. ಈ ಮಧ್ಯಕಾಲದಲ್ಲಿ ಪ್ರಕಾಶಿತವಾದ ಎಲ್ಲ ಕವನಗಳನ್ನೇನೂ ಈ ಸಂಗ್ರಹದಲ್ಲಿ ಸಂಗ್ರಹಿಸಿಲ್ಲ. ಮುಂದಿನ ಸಂಗ್ರಹಗಳಲ್ಲಿ ಅವು ಬರುವವು. ಈವರೆಗೂ ಈ ಕವನಗಳನ್ನು ಬರಮಾಡಿಕೊಂಡ ರಸಿಕವೃಂದವು ಇದನ್ನೂ ಇನ್ನು ಬೇಗನೇ ಬರಲಿರುವ ಸಂಗ್ರಹಗಳನ್ನೂ ಸಹೃದಯತೆಯಿಂದ ಸ್ವೀಕರಿಸುವರು ಎಂದು ನಂಬಿದ್ದೇನೆ.

ಸೊಲ್ಲಾಪುರ ನೀಲಾನಗರ
೮-೭-೧೯೫೧

—ದ. ರಾ. ಬೇಂದ್ರೆ

## ಪ್ರಕಾಶಕನ ಮಾತು . . .

ಮೊಟ್ಟಮೊದಲ ಸಲ ಗ್ರಂಥರೂಪದಲ್ಲಿ ಬೆಳಕು ಕಾಣುತ್ತಿರುವ ಈ 'ಗಂಗಾವತರಣ' ಕವನಸಂಗ್ರಹವನ್ನು ನಮ್ಮ ಗ್ರಂಥಮಾಲೆಯ ಬಿಡಿ ಮುತ್ತನ್ನಾಗಿ ಪ್ರಕಟಿಸಲು ಅನುಮತಿ ಕೊಟ್ಟುದಕ್ಕಾಗಿ ಶ್ರೀ. ಅಂಬಿಕಾತನಯ ದತ್ತ (ದ. ರಾ. ಬೇಂದ್ರೆ) ಅವರಿಗೆ ನಾನು ತುಂಬಾ ಉಪಕೃತನಾಗಿದ್ದೇನೆ.

ಇದರಂತೆಯೆ 'ಹೃದಯ ಸಮುದ್ರ' ಎಂಬುದಿನ್ನೊಂದು ಹೊಸ ಕವನಸಂಗ್ರಹವು ಅಚ್ಚಿಗಾಗಿ ಸಿದ್ಧವಾಗುತ್ತಲಿದೆ. ಬೇಗನೆ ಮುದ್ರಿತವಾಗಿ ರಸಿಕರ ಕೈಸೇರುವುದೆಂದು ನಿರೀಕ್ಷಿಸಿದ್ದೇವೆ.

'ಸಖೀಗೀತ' 'ಮೇಘದೂತ'ದ ಪುನರಾವೃತ್ತಿಗಳೂ ಈಗ ಅಚ್ಚಿನಲ್ಲಿದ್ದು ಇಷ್ಟರಲ್ಲಿಯೇ ಪ್ರಕಟವಾಗಲಿವೆ.

ಶ್ರೀ. ದ. ರಾ. ಬೇಂದ್ರೆ (ಅಂಬಿಕಾತನಯದತ್ತ) ಅವರ ವ್ಯಕ್ತಿಪರಿಚಯ ಕಾವ್ಯಪರಿಚಯಗಳನ್ನು ರಸಿಕರಿಂದ, ತಜ್ಞವಿಮರ್ಶಕರಿಂದ, ಸಹೃದಯರಿಂದ ಬರೆಯಿಸಿದ ಒಂದು ಗ್ರಂಥವನ್ನು ಮನೋಹರ ಗ್ರಂಥಪ್ರಕಾಶನ ಸಮಿತಿಯ ಸಂಪಾದಕ ಮಂಡಲದವರು ಬೇಗನೆ ಬೆಳಕಿಗೆ ತರಲಿದ್ದಾರೆ.

ಗಂಗಾವತರಣವನ್ನು ಅಲ್ಪಾವಕಾಶದಲ್ಲಿಯೇ ಮುದ್ರಿಸಿ ಕೊಟ್ಟ ಹಿಂದ ಮಾತಾ ಮುದ್ರಣಾಲಯದ ಶ್ರೀ ಎಂ. ಎ. ಕಾಮತ ಬಿ. ಎಸ್‌ಸಿ. ಅವರಿಗೆ ನಾನು ಕೃತಜ್ಞನಾಗಿದ್ದೇನೆ.

———

# ಪರಿವಿಡಿ



ಗಂಗಾವತರಣ

ಗಂಗಾವತರಣ

# ಪ್ರಾರ್ಥನೆ ಮತ್ತು ಸ್ತೋತ್ರಗಳು

# ಪ್ರಾರ್ಥನೆ . . . . ೧

ಲೇಸೆ ಕೇಳಿಸಲಿ ಕಿವಿಗೆ, ನಾಲಗೆಗೆ ಲೇಸೆ ನುಡಿದು ಬರಲಿ.
ಲೇಸೆ ಕಾಣಿಸಲಿ ಕಣ್ಗೆ, ಜಗದೊಳಗೆ ಲೇಸೆ ಹಬ್ಬುತಿರಲಿ.
ಲೇಸೆ ಕೈಗಳಿಂದಾಗುತಿರಲಿ, ತಾ ಬರಲಿ ಲೇಸೆ ನಡೆದು.
ಲೇಸನುಂಡು, ಲೇಸುಸಿರಿ ಇಲ್ಲಿರಲಿ ಲೇಸೆ ಮೈಯ್ಯ ಪಡೆದು.

ನಿನ್ನ ಮಮತೆಯ ಬಯಕೆಯಾವು ಹಾಡಿನ ಹಾಲನನವರತ ಕರೆಯುತಿರಲು
ನಿನ್ನ ನೆನೆವುದೆ ತಪವು, ಉಳಿದ ಶಾಸ್ತ್ರದ ಜಪವು ಕೊರಳೊಳಗೆ ಬಿದ್ದ ಉರಲು.
ತನ್ನದಲ್ಲದುದಕ್ಕೆ ಜೊಲ್ಲು ಸುರಿಸುವುದೇಕೆ? ಬರಿದೆ ತೆರೆದೇನು ಬಾಯಿ?
ಹಾಡ ಕಟ್ಟುವ ಹೆಮ್ಮೆ ಬರಡೆಮ್ಮೆ; ನನಗೆ ಇದು ಗೊತ್ತಿಲ್ಲವೇನೆ ತಾಯಿ?

ನಿನ್ನ ಕಂಡವರೆಲ್ಲ ಹಾಡ ಕಟ್ಟದೆ ಇಲ್ಲ; ನಿನ್ನ ಹೆಸರವಕೆ ಬಂತು;
ಶಿವನ ತಲೆ ಕಟ್ಟಲಾರದ ಹೊಳೆಯ ಸರಿದೊರೆಯ ಹಾಡ ಕಟ್ಟುವದದೆಂತು?
ನಿನ್ನಂಥ ಪುಣ್ಯವಂತಿಯ ಕಂಡು ಮೌನದಿಂದಿಹುದೊಂದು ಪಾಪವೆಂದು,
ಬಾಯಿ ತೆರೆದೆನು: ಬಂದ ಸ್ವಚ್ಛಂದ ಗೀತವೇ ಸಂತಾಪ ಹರಿಸಲೆಂದು.

ಭರತಭೂಮಿಯಲೊಮ್ಮೆ ತುಂಬಿಕೊಂಡಿರುತಿದ್ದ ಚಿನ್ನ ಬಂಗಾರ-ಹೊಗೆಯು
ನಿನ್ನ ಬೆಳವೊಲ ದಂಡೆಯಲ್ಲಿ ಕಳೆಗೊಂಡಿರುವ ಹಣ್ಣು ನಗೆಮೊಗದ ಬಗೆಯು!
ತಾಯ ತೊಡೆಯಲ್ಲಾಡಿ ಬೆಳೆಯದಿಹ ಕೂಸುಗಳು ಇಳೆಯೊಳೆಲ್ಲಾದರುಂಟೆ?
ನಮ್ಮ ಸ್ವಾರಾಜ್ಯ ಸಾಮ್ರಾಜ್ಯಗಳ ಕ್ರೀಡೆಯದು ಈ ನಿನ್ನ ದಂಡೆಗುಂಟೇ!

ಭೂಮಿತಾಯಿಯ ಕಾಟಕಾಗಿ ಇಳೆಗಿಳಿದಂಥ ಚಿತ್ರಾವತಾರ ಮಾಲೆ
ಸಮಯಕ್ಕೆ ಬಂದರೂ, ಅವಸರದಿ ತೆರಳಿತ್ತು—ಜಗ ಮತ್ತೆ ಕಾಡುಪಾಲೇ!
ನೆವಕೆ ಬಂದರು, ಈಗು ನಿಂತಿರುವೆ ನೀನು ನಿಜ ನಿತ್ಯ ಸಂಸಾರಪಾರ!
ಹತ್ತು ಅವತಾರಕ್ಕು ಹಿರಿದೆಂಬೆ ಹಡೆದವ್ವ ನಿನ್ನ ಗಂಗಾವತಾರ.

ಕೂಸ ಅಳುವನು ಕೇಳಿ, ತೀರಿ ಹೋಗಿಹ ತಾಯಿ ಬಂದಳೆಂಬಂತೆ ಭರದಿ
ಸ್ವರ್ಗವಾಸವ ತೊರೆದು ಬಂದೆ ನೀ ಭವಬಂಧನಿರ್ಭೀತಳೆಂಬ ತೆರದಿ.
ಶ್ರೀಮುಕ್ತಿದಾತೆ ನೀ, ಶಿವಶಿರೋಮಣಿ ಭೂತೆ, ಯಾವ ಕಡೆಗಿದ್ದರೇನು?
ಹುಟ್ಟದ್ದೆ, ಹರಿದದ್ದೆ, ಕಡಲಕಡೆ ಮುಟ್ಟಿದ್ದೆ—ಅದೇ ಮುಕ್ತಿ ಕ್ಷೇತ್ರ ತಾನು!

ಎಲ್ಲಿಹುದಯೋಧ್ಯೆ? ಎಲ್ಲಿಹುದು ದ್ವಾರಾವತಿಯು? ಎಲ್ಲಿ ಗೋಕುಲವದೀಗ?
ರಾಮಕೃಷ್ಣರ ಕೀರ್ತಿ ನಾಮಶೇಷವು ತಾನೆ, ಕಾಲವಶವೆಲ್ಲ ಬೇಗ !
ನೆಲಮುಗಿಲುಗಳು ಇರುವ ವರೆಗೆ ಗಂಗೆಯು ಉಂಟು, ಉಂಟವಳ
ಧವಲಮೂರ್ತಿ.
ಶ್ರೀಭಗೀರಥ ಸಾರ್ವಭೌಮ ನಿನ್ನದ್ದು ಒಂದೆ ನಿಜವಾದ ಅಮರ ಕೀರ್ತಿ.

' ರಾಜರಮಣಿಯರೆದೆಗೆ ಬೆಳಗಿನಲ್ಲುಳಿದಂಥ ಕಸ್ತೂರಿ ಬಿದ್ದು ಕೆಳಕೆ
ಮೈತೊಳೆದ ನೀರಿನೊಡ ಗಂಗೆಯಲಿ ಕೂಡಿದರೆ ಮುಕ್ತಿ ಕಸ್ತೂರಿಮೃಗಕೆ '
—ಹೀಗೆ ಹಾಡಿದ ಕವಿಯ ನಂಬಿ, ನಿನ್ನಲಿ ಮಿಂದೆ; ನಾನವನ ಬಟ್ಟೆಯುವನು.
ನನ್ನ ತಾಯಿಗೆ ಮುಕ್ತಿ ಮಿಂದಂದೆಯಾಗಿತ್ತು; ನಾನವಳ ಹೊಟ್ಟೆಯುವನು.

ಶಿವನಟ್ಟಹಾಸ! ಹಿಮಗಿರಿಯ ಕರುಣಾಪಾಂಗ! ತೊರೆಹಾಲು
ಗೌರಿಯೆದೆಯಾ !
ಎಂಬಂತನಾದಿಯಿಂದಿಂದಿಗೂ ಹರಿಯುತಿದೆ ಭಾರತಿಯ ಮಾತೃಹೃದಯಾ!
ತನ್ನ ಮಕ್ಕಳಿಗಾಗಿ ಏನು ಮಾತೆಯ ರೀತಿ! ಆ ಪದವಿ ಯಾವ ಕಂಡ ?
ನನ್ನ ಗಂಗಾಷ್ಟಕವು ಆ ಮಾತೃಪದದಲ್ಲಿ ಆಗಿರಲಿ ಜ್ಞಾನಪಿಂಡ.

ಇಳಿದು ಬಾ ತಾಯಿ
ಇಳಿದು ಬಾ

ಹರನ ಜಡೆಯಿಂದ
ಹರಿಯ ಅಡಿಯಿಂದ
ಋಷಿಯ ತೊಡೆಯಿಂದ
ನುಸುಳಿ ಬಾ
ದೇವ ದೇವರನು ತಣಿಸಿ ಬಾ
ದಿಗ್ದಿಗಂತದಲಿ ಹಣಿಸಿ ಬಾ
ಚರಾಚರಗಳಿಗೆ ಉಣಿಸಿ ಬಾ
ಇಳಿದು ಬಾ ತಾಯಿ
ಇಳಿದು ಬಾ.

ನಿನಗೆ ಪೊಡಮಡುವೆ
ನಿನ್ನನುಡುತೊಡುವೆ
ಏಕೆ ಎಡೆತಡೆವೆ
ಸುರಿದು ಬಾ
ಸ್ವರ್ಗ ತೊರೆದು ಬಾ
ಬಯಲ ಜರೆದು ಬಾ
ನೆಲದಿ ಹರಿದು ಬಾ
ಬಾರೆ ಬಾ ತಾಯಿ ಇಳಿದು ಬಾ
ಇಳಿದು ಬಾ ತಾಯಿ
ಇಳಿದು ಬಾ.

ನನ್ನ ತಲೆಯೊಳಗೆ
ನನ್ನ ಬೆಂಬಳಿಗೆ
ನನ್ನ ಒಳಕೆಳಗೆ
ನುಗ್ಗಿ ಬಾ
ಕಣ್ಣು ಕಣ ತೊಳಿಸಿ
ಉಸಿರ ಎಳೆ ಎಳಸಿ
ನುಡಿಯು ಸಸಿ ಮೊಳೆಸಿ
ಹಿಗ್ಗಿ ಬಾ
ಎದೆಯ ನೆಲೆಯಲ್ಲಿ ನೆಲಿಸಿ ಬಾ
ಜೀವ ಜಲದಲ್ಲಿ ಚಲಿಸಿ ಬಾ
ಮೂಲ ಹೊಲದಲ್ಲಿ ನೆಲಿಸಿ ಬಾ
ಇಳಿದು ಬಾ ತಾಯಿ
ಇಳಿದು ಬಾ.

ಕಂಚು ಮಿಂಚಾಗಿ ತೆರಳಿ ಬಾ
ನೀರು ನೀರಾಗಿ ಉರುಳಿ ಬಾ
ಮತ್ತೆ ಹೊಡೆಮುರಳಿ ಹೊರಳಿ ಬಾ
ದಯೆಯಿರದ ದೀನ
ಹರೆಯಳಿದ ಹೀನ
ನೀರಿರದ ಮೀನ
ಕರೆಕರೆವ ಬಾ
ಇಳಿದು ಬಾ ತಾಯಿ
ಇಳಿದು ಬಾ.

ಕರು ಕಂಡ ಕರುಳೆ
ಮನ ಉಂಡ ಮರುಳೆ
ಉದ್ದಂಡ ಅರುಳೆ
ಸುಳಿಸುಳಿದು ಬಾ

ಶಿವಶುಭ್ರ ಕರುಣೆ
ಅತಿಕಿಂಚಿದರುಣೆ
ವಾತ್ಸಲ್ಯವರಣೆ
ಇಳಿ ಇಳಿದು ಬಾ
ಇಳಿದು ಬಾ ತಾಯಿ
ಇಳಿದು ಬಾ.

ಕೊಳೆಯ ತೊಳೆವವರು ಇಲ್ಲ ಬಾ
ಬೇರೆ ಶಕ್ತಿಗಳು ಹೊಲ್ಲ ಬಾ
ಹೀಗೆ ಮಾಡದಿರು, ಅಲ್ಲ ಬಾ
ನಾಡಿ ನಾಡಿಯನು ತುತ್ತ ಬಾ
ನಮ್ಮ ನಾಡನ್ನೆ ಸುತ್ತ ಬಾ
ಸತ್ತ ಜನರನ್ನು ಎತ್ತ ಬಾ.

ಸುರಸ್ವಪ್ನವಿದ್ದ ಪ್ರತಿಬಿಂಬ ಬಿದ್ದ
ಉದ್ಬುದ್ಧ ಶುದ್ಧ ನೀರೇ
ಎಚ್ಚತ್ತು ಎದ್ದ ಆಕಾಶದುದ್ದ
ಧರೆಗಿಳಿಯಲಿದ್ದ ಧೀರೇ
ಸಿರಿವಾರಿಜಾತ ವರಪಾರಿಜಾತ
ತಾರಾ-ಕುಸುಮದಿಂದೆ

ವೃಂದಾರವಂದ್ಯೆ ಮಂದಾರಗಂಧೆ
ನೀನೇ ತಾಯಿ ತಂದೆ.
ರಸಪೂರಜನ್ಯೆ ನೀನಲ್ಲ ಅನ್ಯೆ
ಸಚ್ಚಿದಾನಂದಕನ್ಯೆ
ಬಂದಾರೆ ಬಾರೆ, ಒಂದಾರೆ ಸಾರೆ
ಕರ್ಣಧಾರೆ ತಡೆವರೇನೇ?
ಅವತಾರವೆಂದೆ ಎಂದಾರೆ ತಾಯಿ, ಈ ಅಧಃಪಾತವನ್ನೇ
ಹರಕೆ ಸಂದಂತೆ
ಮಮತೆ ಮಿಂದಂತೆ
ತುಂಬಿ ಬಂದಂತೆ
ದುಮ್‌ದುಮ್ ಎಂದಂತೆ
ದುಡುಕಿ ಬಾ
ನಿನ್ನ ಕಂದನ್ನ ಹುಡುಕಿ ಬಾ
ಹುಡುಕಿ ಬಾ ತಾಯಿ
ದುಡುಕಿ ಬಾ.

ಹರಣ ಹೊಸದಾಗೆ ಹೊಳೆದು ಬಾ
ಬಾಳು ಬೆಳಕಾಗೆ ಬೆಳೆದು ಬಾ
ಕೈ ತೊಳೆದು ಬಾ
ಮೈ ತಳೆದು ಬಾ
ಇಳೆಗಿಳಿದು ಬಾ ತಾಯೀ
ಇಳಿದು ಬಾ ತಾಯಿ
ಇಳಿದು ಬಾ

ಶಂಭು-ಶಿವ-ಹರನ ಚಿತ್ತೆ ಬಾ
ದತ್ತ ನರಹರಿಯ ಮುತ್ತೆ ಬಾ
ಅಂಬಿಕಾತನಯನತ್ತೆ ಬಾ
ಇಳಿದು ಬಾ ತಾಯಿ
ಇಳಿದು ಬಾ.

# ಕೌಟುಂಬಿಕ ಭಾವಗೀತೆಗಳು

## ೪ . . . . ಬಾರೊ ಸಾಧನಕೇರಿಗೆ

ಬಾರೊ ಸಾಧನಕೇರಿಗೆ ।
ಮರಳಿ ನಿನ್ನೀ ಊರಿಗೆ ॥

ಮಳೆಯು ಎಳೆಯುವ ತೇರಿಗೆ
ಹಸಿರು ಏರಿದೆ ಏರಿಗೆ
ಹಸಿರು ಸೇರಿದೆ ಊರಿಗೆ
ಹಸಿರು ಚಾಚಿದೆ ದಾರಿಗೆ
ನಂದನದ ತುಣುಕೊಂದು ಬಿದ್ದಿದೆ
ನೋಟ ಸೇರದು ಯಾರಿಗೆ? ॥ ಬಾರೊ....

ಮಲೆಯ ಮೊಗವೇ ಹೊರಳಿದೆ
ಕೋಕಿಲಕೆ ಸವಿ ಕೊರಳಿದೆ
ಬೇಲಿಗೂ ಹೂ ಬೆರಳಿದೆ
ನೆಲಕೆ ಹರೆಯವು ಮರಳಿದೆ
ಭೂಮಿತಾಯ್ ಒಡಮುರಿದು ಎದ್ದಳೊ
ಶ್ರಾವಣದ ಸಿರಿ ಬರಲಿದೆ ॥ ಬಾರೊ....

ಮೋಡಗಳ ನೆರಳಾಟವು
ಅಡವಿ ಹೂಗಳ ಕೂಟವು
ಕೋಟಿ ಜೇನ್ನೊಣಕೂಟವು
ಯಕ್ಷಿ ಮಾಡಿದ ಮಾಟವು
ನೋಡು ಬಾ ಗುಂಪಾಗಿ ಪಾತರ-
ಗಿತ್ತಿ ಕುಣಿಯುವ ತೋಟವು ॥ ಬಾರೊ....

ಮರವು ಮುಗಿಲಿಗೆ ನೀಡಿದೆ
ಗಿಡದ ಹೊದರೊಳು ಹಾಡಿದೆ
ಗಾಳಿ ಎಲ್ಲೊ ಆಡಿದೆ
ದುಗುಡ ಇಲ್ಲಿಂದೋಡಿದೆ
ಹೇಳು ಗೆಳೆಯಾ ಬೇರೆ ಎಲ್ಲೀ
ತರದ ನೋಟವ ನೋಡಿದೆ? ॥ ಬಾರೊ....

ವಿಶ್ವಮಾತೆಯ ಗರ್ಭಕಮಲಜಾತ-ಪರಾಗ-
ಪರಮಾಣು ಕೀರ್ತಿ ನಾನು ।

ಭೂಮಿತಾಯಿಯ ಮೈಯ ಹಿಡಿಮಣ್ಣುಗುಡಿಗಟ್ಟಿ
ನಿಂತಂಥ ಮೂರ್ತಿ ನಾನು ।

ಭರತಮಾತೆಯ ಕೋಟಿ ಕಾರ್ತಿಕೋತ್ಸವದಲ್ಲಿ
ಮಿನುಗುತಿಹ ಜ್ಯೋತಿ ನಾನು ।

ಕನ್ನಡದ ತಾಯಿ ತಾವರೆಯ ಪರಿಮಳವುಂಡು
ಬೀರುತಿಹ ಗಾಳಿ ನಾನು ।

ನನ್ನ ತಾಯಿಯ ಹಾಲು ನೆತ್ತರವ ಕುಡಿದಂಥ
ಜೀವಂತ ಮಮತೆ ನಾನು ।

ಈ ಐದು ಐದೆಯರೆ ಪಂಚಪ್ರಾಣಗಳಾಗಿ
ಈ ಜೀವ ದೇಹನಿಹನು ।

ಹೃದಯಾರವಿಂದದಲ್ಲಿರುವ ನಾರಾಯಣನೆ
ತಾನಾಗಿ ದತ್ತನರನು ।

ವಿಶ್ವದೊಳನುಡಿಯಾಗಿ ಕನ್ನಡಿಸುತಿಹನಿಲ್ಲಿ
ಅಂಬಿಕಾತನಯನಿವನು ।

## ಅಂಬಿಕಾತನಯದತ್ತ . . . ೬

ಯಾವ ಯೋಗನಿದ್ರೆಯಲ್ಲಿ ಏನು ಕನಸ ಕಂಡೆನೋ ।
ಯಾರ ಹಾಲನುಂಡೆನೊ ॥

ಈ ವಿಶ್ವಜಾಲದಲ್ಲಿ ಬಂದೆ ಅದಕೆ ಮಿಡುಕುತ ।
ಅದರ ಧಾರೆ ಹುಡುಕುತ ॥

ನಿನ್ನ ಹೃದಯಲೋಕದಲ್ಲಿ ಪ್ರೇಮಶಿಖರವೆತ್ತುತಾ ।
ಕರೆದಿತೆನ್ನ ಮುತ್ತುತಾ ॥

ಲೋಹಚುಂಬಕವನು ಕಂಡ ಲೋಹದಂತೆ ನುಗ್ಗಿದೆ ।
ಮಮತೆಯಿಂದ ಹಿಗ್ಗಿದೆ ॥

ಬ್ರಹ್ಮಾಂಡದಾಳದಲ್ಲಿ ಆಳುತಿಹುದು ಚುಕ್ಕೆಯು ।
ಬಂತೆ ಅದಕೆ ಬಿಕ್ಕೆಯು ? ॥

ಆದರೇನು ! ಅದರ ಕಿರಣ ಎಂದೊ ಏನೊ ಉರಳಿತು ।
ಭೂಮಿಯತ್ತ ಹೊರಳಿತು ॥

ನೀರಿನೊಂದು ನೀರಜಾತ ಬೆಳಕಿಗಾಗಿ ಕೆರಳಿತು ।
ಈ ಕಿರಣಕರಳಿತು ॥

ಹೂವ ಹೊಕ್ಕ ಕಿರಣವಾಗ ಹೂ-ನೀರ ನೆಕ್ಕಿತು ।
ರುಚಿಗೆ ಮೆಚ್ಚಿ ಸಿಕ್ಕಿತು ॥

ಅಂತೆ ಕೂಸುತನದ ಗೊಂಬೆಯಲ್ಲಿ ಮುದ್ದು ಬಿಂಬಿಸೆ ।
ನೀನು ಅದನು ಚುಂಬಿಸೆ ॥

ನಿನ್ನ ಮನದ ಮೂಸೆಯಲ್ಲಿ ಭಾವವಾಗಿ ಕರಗಿತು ।
ಜೀವವಾಗಿ ಮಿರುಗಿತು ॥

ನಿನ್ನ ರಕ್ತ ಮಾಂಸದಲ್ಲಿ ಮೈಯ್ಯ ಮನೆಯ ಕಟ್ಟಲು ।
ಅದನು ನಾನು ಮುಟ್ಟಲು ॥
ನಿನ್ನ ಉಸಿರಲುಸಿರಾಡಿಸಿ ಬಸುರಿನಲ್ಲಿ ಬೆಳೆದೆನು ।
ಒಂದು ರೂಪ ತಳೆದೆನು ॥

ಮಗುವು ಆಗಿ ತೊಡೆಗೆ ಬಂದೆ ತೋರೆದು ಬಂತು ನಿನ್ನೆದೆ ।
ಅಂತು ಇಂತು ಎನ್ನದೆ ॥
ಹಾಲಿನೊಡನೆ ಪ್ರೇಮರಸವ ಜೀವದಲ್ಲಿ ತುಂಬಿದೆ ।
ಅಂತೆ ನಿನ್ನ ನಂಬಿದೆ ॥
ಮುದ್ದಿನೊಡನೆ ಮುದ್ದುಮಾತು ಕಲಿಸಿ ಉಲಿಸಿ ನಲಿಸಿದೆ
ನಿನ್ನ ತಿಳಿವ ಸಲಿಸಿದೆ ॥
ನಿನ್ನ ತನುವಿನಿಂದ ಬಂದ ಮುದ್ದು ತನಯನೀತನು ।
ನೀನು ಈಯಲಿತ್ತನು ॥

ತಾಯಿ ಮಾಯಿ ಅಂಬಿಕೆಯೇ ನಿನ್ನ ತನಯ ದತ್ತನು ।
ನೀನು ಇತ್ತುದಿತ್ತನು ॥
ನಿನ್ನ ಜನುಮದೊಂದು ಪಾಡು ಹಾಡು ಆಗಿ ಮೂಡಿತು ।
ನನ್ನ ಕೊರಳು ಹಾಡಿತು ॥
ಮೂರ್ತಿಗಾಗಿ ಮುಗಿದ ಕೈಯ್ಯು ಗುಡಿಗೆ ಸಲ್ಲುವಂತೆಯೇ ।
ಎರಡು ಒಂದೆಂಬಂತೆಯೇ ।
ಹಾಡಲಾಗಿ ಕವಿಯು ಎಂದು ಜನವು ನನ್ನ ಕರೆದಿದೆ ।
ನಿನ್ನ ಹೆಸರು ಮರೆಗಿದೆ ॥

ನಿನ್ನ ಲಲ್ಲೆಯಲ್ಲಿ ಹುಟ್ಟಿ ಬೆಳೆದು ಬಂದ ಸೊಲ್ಲಿದು ।
ಬೇರೆ ಏನು ಬಲ್ಲದು ॥

ನಿನ್ನ ಉದರದೊಂದ ಹೂವ ಸರಸ್ವತಿಗೆ ಸಲಿಸಿದೆ ।
ಚುಕ್ಕೆಯಾಗಿ ನೆಲೆಸಿದೆ ॥

ಸಾವಿರದ ಮನೆಗಳಲ್ಲಿ ನನಗೆ ಮನೆಯ ಮಾಡಿದೆ ।
ತಾಯಿ ಆಟ ಹೂಡಿದೆ ॥

ನಿನ್ನ ಹೆಸರಿನಲ್ಲಿ ನಾನು ಬರೆವುದೇನು ಸೋಜಿಗ ।
ತಿಳಿಯಲಾರದೀ ಜಗ ॥

## ೭ . . . . . ತೇಲಾಡುವಾಗ

" ತೇಲಾಡುವಾಗ ಮನಸು
ಮೇಲಾಡತಾವ ಕನಸು
ತಾಕಾಡುವಾಗ ಇತ್ತ
ತೇಕಾಡತಾವ ಚಿತ್ತ "

ಬೇಕಾದ ಬಗೆಯು ದಂಡು
ನೂಕಾಡಿ ನುಗ್ಗಿ ಬಂದು
ಬೇಕಾದುದಾದರೇನು
ಸಾಕಾಗದಾಗ ತಾನು

ಏರಾಡೆ ಗಾಳಿ ಉಕ್ಕಿ
ಹಾರಾಡತಾವ ಹಕ್ಕಿ
ಕಲಕಾಡಿದಾಗ ಕೆಸರು
ಕೆಲಗೇರಿ ಬರಿಯ ಹೆಸರು

ಎಲ್ಲೇನೊ ಕೊರತೆ ಬಿದ್ದು
ಇಲ್ಲೇನೆ ಭೂತವೆದ್ದು
ಕುಣಿದಾಡುವಾಗ ಎಂತು
ತಣಿದೀತು ಜೀವಜಂತು

ಕೊಲ್ಲಿಸಿದೆ ಇಣಿಚಿಯನ್ನ
ತಲ್ಲಣಿಸಿ ಜೀವ ನನ್ನ
ಕಡೆಮುಟ್ಟಿದಂತೆ ತ್ರಾಣ
ಚಡಪಡಿಸತಾವ ಪ್ರಾಣ

“ ಅಯ್ಯೆಯ್ಯೊ ತಾಯಿ ನೊಂದೆ
ಕೈಯ್ಯೀಯೆ ಸತ್ತೆ ” ಎಂದೆ
“ ಚಿಂತ್ಯಾಕೊ ನನ್ನ ಬಾಳ ”
ಅಂತಾವ ಅಂತರಾಳ

ಎದ್ದಾಗ ಏನು ಇನ್ನ
ನಿದ್ಯಾಗ ಕೂಡ ನಿನ್ನ
ಮಿಡುಕಾಡಿ ಬಗೆಯ ಬಾಯಿ
ಹುಡುಕಾಡತಾವ ತಾಯಿ

ಪಾತಾಳ ಕಂಡರೇನು
ಆ ತಾಯಿ ಬಿಡುವಳೇನು
ಕಾಯವನು ಹೆತ್ತ ಕರುಳು
ಕಾಯುವದು ಹಗಲು ಇರುಳು

ಈ ತಲೆಯು ಇರಲಿ ಬುರುಡೆ
ಆ ತಾಯಿ ಏನು ಕುರುಡೆ
ತಾಕಿದರೆ ಸಾಕು ತೊಡೆಯು
ನೂಕೀತು ಹಾಡ ಹೆಡೆಯು

ತುಂಬಿದೆಗೆ ನೋತು ಕೂತು
ತಂಬೂರಿ ಹಾಗೆ ಆತು
ಬರತಾವ ತಾನೆ ತಾನಾ
ಹರದಾಡತಾವ ಗಾನಾ

ನೂರಾಡಿ ಏನು ಫಲವು
    ತಾರಾಡುವಾಗ ಒಲವು
ಕಿವಿಗಿಳಿದು ಬರಲು ಹಾಡು
    ಸವಿಗಾಗ ಯಾವುದೀಡು

ಸಡಲಿದರು ಪ್ರಾಣತಂತು
    ಮಿಡಿದೊಡನೆ ಜೀವ ಬಂತು
ಮುಟ್ಟುತಲೆ ತಾಯ ಬೆರಳು
    ಹುಟ್ಟುವದು ಹುರುಳು ತಿರುಳು

ನಮ್ಮಿಂದ ಹರಿದು ಚಿಂತಿ
    ಜುಮ್ಮೆನ್ನುತಾವ ತಂತಿ
ಮುಳುಗುವವು ವಾದಗೀದ
    ತುಳುಕಾಡಿ ಏಕನಾದ

ಒಳಗಿಂದ ತಾಯದನಿಯು
    ವೊಳಗಿತ್ತು ಶ್ರುತಿಯ ಖನಿಯು
ಬಿದ್ದಂತೆ ಸ್ವಾತಿಮಳೆಯು
    ಇದ್ದಲ್ಲೆ ಚಿಪ್ಪಿನೆಳೆಯು

ಏನೇನೊ ಛಂದದಲ್ಲಿ
    ತಾನಾಗಿ ಮಿಂಚುಬಳ್ಳಿ
ಉಚ್ಚಳಿಸುತಿರಲು ಚೆಂದ-
    ಎಚ್ಚತ್ತೆ ನಿದ್ದೆಯಿಂದ

ಹಾಸಾದ ಮಿಂಚಿನಂದ
ಬೀಸಿದ್ದ ಸೆರಗಿನಿಂದ
ಸೆಳೆದಂತೆ ಎರಡು ನೂಲು
ಉಳಿದಾವ ನಾಕು ಸಾಲು

“ ತೇಲಾಡುವಾಗ ಮನಸು
ಮೇಲಾಡತಾವ ಕನಸು
ತಾಕಾಡುವಾಗ ಇತ್ತ
ತೇಕಾಡತಾವ ಚಿತ್ತ ”

## ಫಜಾರಗಟ್ಟೀ ಮುಟ್ಟೋಣು ಬಾ

ಫಜಾರಗಟ್ಟೀ ಮುಟ್ಟೋಣು ಬಾ
ಹಿಂದಿನ ಆಟಾ ಮುಗಿಸೋಣು ಬಾ
ಮುಂದಿನ ಆಟಾ ನಡೆಸೋಣು ಬಾ ॥ ಪಲ್ಲ ॥

ಇದs ಇದs ಅಂತ ಎದೀ ಅನ್ನತದ
ಅದs ಅಲ್ಲಿ ಮನಿ ಕಟ್ಟೋಣು ಬಾ ।
ನೆಲೀ ವ್ಯಾಲ ನೆಲಿ ಅಲ್ಲ ಸಂಗಿ, ಅದು
ಅದs ನಿಜದ ನೆಲ ಮುಟ್ಟೋಣು ಬಾ ॥ ೧ ॥

ಅಂಗಲಿಂಗದ ಜೋಡಿ ಕೂಡಿ ಹೊಸ
ಗಿಣೀ- ಗೆಣೆತನs ನೋಡೋಣ ಬಾ ।
ಮನಾ ಎಂಬೋ ಹೊಸ ಬನಾ ತೆರದರs
ಜನಾ ಕಂಡು ಅದ ಕುಡೋಣು ಬಾ ॥ ೨ ॥

ಪುಂಡರೀಕ ನಾ, ಮಹಾಶ್ವೇತೆ ನೀ
ಆದಾಂಗಿತ್ತು ಅದ ನೆನಸೋಣ ಬಾ ।
ತುಂಬೂರ ನಾನಾಗಿ ರಂಬೆ ನೀನಾದಾಗ
ಹಚ್ಚೀದ ಬಳ್ಳಿಗೆ ಹಣಿಸೋಣ ಬಾ ॥ ೩ ॥

ಗುರುವಿನಂಗಳದ ಗಿಡಾ ಬಳ್ಳಿಯಾಗಿ
ಹೊಸಾ ಹೂವು ನಾವು ಸುರಿಸೋಣ ಬಾ ।
ತಾಯಿ ಪಾದದಾನಂದ ಗಂಧ ಉಂಡು
ಬೆಂದವರ ಜೀವ ಬೆರಸೋಣ ಬಾ ॥ ೪ ॥

## ಬರುವದೇನೆ ನೆಪ್ಪಿಗೆ . . . ೯

ಬರುವದೇನೆ ನೆಪ್ಪಿಗೆ
ನಮ್ಮ ನಿಮ್ಮ ಒಪ್ಪಿಗೆ
ಎಲ್ಲೊ ಏನೊ ನೋಡಿದೆ
ಹಾಗೆ ಬಂದು ಕೂಡಿದೆ.

ಬೆಳಕು ಬೆಂಕಿ ಬೆರೆತುಕೊಂಡು
ಭಾವವು ಹೊರದೂಡಿರೆ
ಬಾಳು ಮೊಳೆತು ಸುಗ್ಗಿ ನನೆತು
ಹೂವಿನಂತೆ ಮಾಡಿರೆ
ಆಹಾ ಚೆಲುವೆ ! ಎಂದು ಕುಣಿದೆ
ಮಿಕ್ಕ ಸಂಜೆ ಮುಬ್ಬಿಗೆ
ಒಹೊ ಒಲವೆ ! ಎಂದು ಕರದೆ
ಪಲ್ಲವಿಸಿದ ಹುಬ್ಬಿಗೆ.

ಅಂದು ಏನ ಬೇಡಿದೆ
ಏನ ನೆನಸಿ ಹಾಡಿದೆ
ಬರುವದೇನೆ ನೆಪ್ಪಿಗೆ
ಎದೆಗೆ ಎದೆಯ ಅಪ್ಪಿಗೆ.

ಬರುವದೇನೆ ನೆಪ್ಪಿಗೆ
ಕೂಡಿದೊಂದ ತಪ್ಪಿಗೆ
ಏನೊ ಏನೊ ನೂತೆವು
ಬದುಕಿನೆಳೆಗೆ ಜೋತೆವು

ಮೋಡದೊಂದು ನಾಡಿನಲ್ಲಿ
ಮಳೆಯ ಮಿಂಚು ಕಂಡೆವು
ಯಾವ ಫಲಕೆ ಇಳಿಯುತಿತ್ತೊ
ಮಣ್ಣ ಬೀಜ ಉಂಡೆವು
ದುಃಖದೊಂದು ಶೂಲೆಯಲ್ಲಿ
ನೋವುಗೊಂಡು ತಿಣುಕಿದೆ
ಸುಖದ ತೊಟ್ಟು ತೊಟ್ಟಿಗಾಗಿ
ಹತ್ತು ಕಡೆಗೆ ಹಣಿಕಿದೆ.

ಇಬ್ಬರೆಗೂ ಸೋತೆವು
ಆಸರಾಗಿ ಆತೆವು
ಬರುವದೇನೆ ನೆಪ್ಪಿಗೆ
ಹೊರತಾದೆವು ಉಪ್ಪಿಗೆ.

ಬರುವದೇನೆ ನೆಪ್ಪಿಗೆ
ನಾವು ಬಿದ್ದ ಟೊಪ್ಪಿಗೆ
ತಲೆಯ ತೆರೆದು ಬಂದಿತು
ಎಚ್ಚರೆಚ್ಚರೆಂದಿತು.

ಯಾವ ಲೋಕದಿಂದಲಿಳಿದೊ
ಹೊಸ ಸುಗಂಧ ಬೀರಿದೆ
ರಣೋತ್ಸಾಹ ಕಹಳೆಯಂತೆ
ನವಚೇತನ ಊರಿದೆ
ಇಬ್ಬರನ್ನು ನೂಗಿಕೊಂಡು
ಒಬ್ಬನಾಗಿ ಎದ್ದಿದೆ
ಚಿತ್ತವೆಲ್ಲಿ ಎನುವಾಗಲೆ
ಕೊಡುವ ಮೊದಲೆ ಕದ್ದಿದೆ.

ಸಲ್ಲುವಲ್ಲಿ ಸಂದಿದೆ
ನಿಲ್ಲುವಲ್ಲಿ ನಿಂದಿದೆ
ಬರುವದೇನೆ ನೆಪ್ಪಿಗೆ
ಜೀವ ಜೀವದಪ್ಪಿಗೆ.

# ೧೦ . . . . ಮಂಗಳಾ

ಬೆಳಕು-ತೊರೆ ತೂರಿ ತೆರೆ
ಕಣ್ಣಂಚಿಗೆ ಬಾಗಿದೆ
ದಿನವು ಬಿದಿಗೆ ಇದ್ದ ಹಾಗೆ
ಚಂದ್ರ ನೋರೆಯಾಗಿರೆ.

ನಗೂ ನಗೂ ಹಾಗೆ ನಗು
ಆಡು ಮಗಳೆ ಮಂಗಳಾ
ತುಂಬಲಿ ಮನೆ ಸುರಿಯಲಿ ಸೊನೆ
ಸೂಸುತಿರಲಿ ಅಂಗಳಾ.

ಮರವು ನಾವು, ನೀವು ಹೂವು
ನಮಗೆ ನಲಿವು ನೀವಿರೆ
ಇರಲಿ ನೀರು ಕಪ್ಪೆ ಕೆಸರು
ಸಾಕು ಇರಲು ತಾವರೆ.

ಸ್ವರ್ಗ, ಮಕ್ಕಳಾಟ ಕಂಡು
ಹಿಗ್ಗಬಲ್ಲ ಕಂಗಳೇ
ಮಗುವಿನ ನಗೆ ಮಗುವಿನ ಬಗೆ
ಮಗುವಿನ ಜಗ ಮಂಗಳೇ.

ರತ್ನಧವಳ ಮುತ್ತು ಹವಳ
ಹಾಗೆಯೆ ಹುಸಿ ನಕ್ಕರೆ
ತುಟಿಯಲೇನು ಜೊಲ್ಲು ಜೇನು
ನಿನ್ನ ಬೆಲ್ಲ ಸಕ್ಕರೆ.

"ಮಗಳೆ ಮಂಗಳೆ, ಬಾರೆ ಕೇಳು ಕಥೆಯ
ಹರುಷವೀಯುವದು ಪರಿಹರಿಸಿ ವ್ಯಥೆಯ
ಬಿಡು ಪಾರಿಜಾತ ಹೂ ಆರಿಸುವದ
ಕೂತ ಪಾತರಗಿತ್ತಿ ಹಾರಿಸುವದ
ಪೋಣಿಸುವೆಯಂತೆ ಆಮೇಲೆ ಮಾಲೆ
ಇಡು ಬಕುಳಗಳನು, ಬಾ ಇತ್ತ ಬಾಲೆ."

"ಏನಣ್ಣ ನಿನ್ನ ಕಥೆ ಇಷ್ಟು ಮುದ್ದೆ ?
ಈ ಕತೆಯ ಕೇಳುತಿರೆ ಬರದೆ ನಿದ್ದೆ ?
ಕತೆಯು ಚಿಕ್ಕದೆ, ಹರಟೆಯಂತೆ ಉದ್ದೆ ?"

"ಬಾರೆ ಹರಟೆಯ ಮಲ್ಲಿ, ಕತೆಯು ಮುದ್ದು
ಹರಟೆಯಂತಲ್ಲ ಇದು; ಉದ್ದೊ ಉದ್ದು
ಬಹಳ ಚೊಕ್ಕದು, ನಿನ್ನ ನಗೆಯಂತೆ ಇದ್ದು—

"ಬೆಳಗು ನಾ ಹೋಗಿದ್ದೆ ಯಕ್ಷಲೋಕಕ್ಕೆ
ದುಃಖ ಅಲ್ಲಿಲ್ಲಃ ಇಲ್ಲೆಡೆಯು ಶೋಕಕ್ಕೆ
ಅಲ್ಲಿ ಬರಿ ಹಾಸ ಬರಿ ಆಟ ಪಾಟ
ಏನು ಬಣ್ಣಿಸಲಿ ಒಂದೊಂದು ನೋಟ !

ಕುಣಿಕುಣಿದೆ ಅಲ್ಲಿ ಜನ ಕೆಲಸ ಮಾಡುವರು
ಮಾತನಾಡುತ್ತಿರಲು ಹಾಗೆ ಹಾಡುವರು."

“ನೀನೇನ ಮಾಡಿದೆ, ಅದನು ನೋಡಿ
ಅಣ್ಣಾ, ಕುಣಿದೆಯ ಹಾಡಿ ಅವರ ಕೂಡಿ
ನಿನ್ನ ಕವಿತೆಯ ಹೇಳಿ ಅದರ ಜೋಡಿ?”

“ಇಲ್ಲಕ್ಕ, ನನಗಿಲ್ಲಿಯರಿವೆ ಇರಲಿಲ್ಲ
ಆ ನೋಟದಲಿ ಬೇರೆ ಪರಿವೆ ಇರಲಿಲ್ಲ
ಏನು ಬಳ್ಳಿಗಳಲ್ಲಿ! ಏನು ಹೂವುಗಳು!
ಎಂಥ ಹಳ್ಳಗಳು! ಎಂಥೆಂಥ ರಾವುಗಳು!

ಅಲ್ಲಿ ಗಿಳಿ-ಹಿಂಡು ಹಾರಾಡುತಿತ್ತು
ಹಸುಗೂಸಿನಂತೆ ಚೀರಾಡುತಿತ್ತು
ಜೇಡ ಬಲೆಯಲಿ ಉಯ್ಯಲಾಡುತಿತ್ತು.

ಮೈ ಹಸಿರು ಕೆಂಚೂಚು ಕರಿಯ ಕೊರಳು
ಪಚ್ಚೆ, ಮಾಣಿಕ, ಕೆಚ್ಚ ನೀಲಹರಳು
ದೊಡ್ಡವಿರಲಿಲ್ಲ ಅವು ಈಟು ಈಟು
ಕಣ್ಣ ಪಾಪೆಯ ನೆರಳಿನಂತೆ ಧಾಟು
ಕೆಲವು ಕಡಲೆಯ ಮಾಟ, ಮಾಮಿಡಿಯ ಮಾಟ
ಚಿತ್ರದಂತಿತ್ತು ಜೀವಂತ ಆಟ.

ಆವುಗಳನು ನಾ ಕಂಡು ಹಿಡಿಯ ಹೋದೆ
ಹಿಡಿಹಿಡಿಯುತಿರಲು ನಾ ಹುಡುಗನಾದೆ
ನನ್ನ ಕೈಯೊಳಗಿತ್ತು ಬಾಲಬೋಧೆ.

ಮತ್ತೆ ಬೇರೇ ಹಕ್ಕಿ ಏನು ಚಿತ್ರ
ರೆಕ್ಕೆ ಮೂಡಿದ ಹಾಗೆ ಸ್ನೇಹಿತರ ಪತ್ರ
ಒಳಗಿರುವ ಭಾವಗಳ ಬಣ್ಣ ಮೂಡಿತ್ತು
ರಸ ಸರಸವಾಡುವೊಲು **ಜೀವಗೂಡಿತ್ತು.**"

"ಹೀಗೆಂದರೇನಣ್ಣ ಏನು ಆಗಿತ್ತೇ?
ಮೊದಲೇನು ಹೆಣದಂತೆ ಜೀವ ಹೋಗಿತ್ತೇ?"

"ಒಳಿತನ್ನು ನನ್ನ ಬಂಗಾರಮಣಿ ಗಿಣಿಯೇ!
ನಿನ್ನ ಮಾತಿಗೆ ನನ್ನ ಮಾತು ಅಣಿಯೇ?

ಏಳು ಬಣ್ಣದ ನಾದಿದಂತಿತ್ತು ಹಕ್ಕಿ
ಜೀವ ನಾದಕೆ ಮೂಡಿದಂತೆ ರೆಕ್ಕೆ
ಏಕೆ ಚಿನ್ನಾ, ನಡುವೆ ಖುಕ್ಕೆಂದು ನಕ್ಕಿ?
ಏಕೆ ನೋಡುವೆ ಹೀಗೆ ಕಕ್ಕಾವಿಕ್ಕಿ?"

"ಮುಂದೆ ಹಾರಲಿ ಹಕ್ಕಿ ರೆಕ್ಕೆಯಿಕ್ಕಿ
ಕತೆಯು ಕುಂಟುತ್ತಲಿದೆ ಎಲ್ಲೊ ಸಿಕ್ಕಿ"

"ಹೌದು, ಆ ಹಕ್ಕಿಯನು ಹಿಡಿಯಹೋದೆ
ಹೇಗೆ ಹಿಡಿಯುವದೆಂದು ತಿಳಿಯದಾದೆ
ಏನದರ ಹಾರಾಟ ಏನು ಚೆಲ್ಲಾಟ
ಗರಿಯ ಅಲುಗಾಟ ಕುಲುಕಾಟ ಮಾಟ!

ಆದರಯ್ಯೋ! ಅಲ್ಲು ಬಲೆಯು ಒಟ್ಟಿತ್ತು
ಜೇಡಹುಳುವಿನ ಕೃತಿಗೆ ಬುರುಸುಗಟ್ಟಿತ್ತು.

ಹಿಡಿವ ಆಸೆಗೆ ಹಕ್ಕಿ ನುಗಿಸಿದೆನು ಒಳಗೆ
ಅದುವು ತಪ್ಪಿಸಲಿಕ್ಕೆ ನುಗ್ಗಿ ಬಳಿಗೆ
ಸಿಕ್ಕಿಕೊಂಡಿತು ಬಲೆಯ ಎಳೆಗಳಿಗೆ
ಕಂಡಿತಾವದೊ ಜೀವದಾಸೆಯಂತೆ
ಮಾಸ ಮುಸುಕಿರುವಂಥ ಕೂಸಿನಂತೆ.

ನನ್ನ ಕೈಹಕ್ಕಿ ಮಟಮಾಯವಾಗಿ
ನಿನ್ನ ತೊಡೆಯಲ್ಲಿತ್ತು ನೀನೆ ತಾಯಾಗಿ."

"ನನ್ನ ಕೂಸಾಗಿತ್ತೆ, ತಾಯಿ, ಅಣ್ಣ
ಎಷ್ಟು ನೊಂದಿತೊ ಪಾಪ ನನ್ನ ಚಿನ್ನ!"

"ತಾಯಾಗಿ ಹಾಯಾಗಿ ತಾನೆ ಆಡುತ್ತ
ನೀನು ಲೀಲೆಯೊಳಿದ್ದೆ ಮಗುವ ನೋಡುತ್ತ
ಆಗ ನಿನ್ನಾ ರೂಪ ಏನು ರೂಪ!
ರಾಣಿ ಎನಬಹುದಾಗಿತ್ತು ರಾಜ ಭೂಪ.

ನಿನ್ನ ರೂಪಕೆ ತಕ್ಕ ನಿನ್ನ ಮಗುವು
ಸುಖದ ಮುಖದೊಳಗುಕ್ಕಿ ಬಂದಂತೆ ನಗುವು
ಮುಖ ಮುದ್ದು ತುಟಿ ಮುದ್ದು ಗಲ್ಲ ಮುದ್ದು
ಕುರುಳು ಹಣೆ ಕಣ್ ಮುದ್ದು ಎಲ್ಲ ಮುದ್ದು.

ನಿನಗಿಂತಲೂ ನಿನ್ನ ಕೂಸೆ ಮುದ್ದು
ಎನ್ನುವಂತೆ ನಿಂತಿತ್ತು ನಿನ್ನನೊದ್ದು—
ಹೀಗೆನ್ನುವಾಗ ಮಂಗಲೆ ಬಂದು ಎದ್ದು
ನನ್ನ ಬೆನ್ನಿಗೆ ಕೊಡುವಳೇನೊ ಗುದ್ದು
ಎಂದೆ, ಕೆನ್ನೆಗೆ ಕೊಟ್ಟಳೊಂದು ಮುದ್ದು.

ಮೊದಲಾಡಿ ತೊದಲಾಡಿ ತೆರೆದು ಬಾಯಿಯನು
ಆ ಕೂಸ ಕರೆದಿತ್ತು ನನ್ನ ತಾಯಿಯನು
ಆ ತಾಯಿ ಎಲ್ಲಿಹಳೊ ಇನ್ನುವರೆಗು
ಎನುತ ತಡಕಾಡುತ್ತ ನಿದ್ದೆವರೆಗು....

ಆಹಾ ಏನಿದು! ಎನುತ ನಾನು ಎದ್ದೆ
ನಿನಗಾಗ ಸಕ್ಕರೆಜೊಂಪುನಿದ್ದೆ
ನಿನಗಾಗಿ ಈ ಕತೆಯ ನೆನಪು ಇಟ್ಟೆ
ಹೇಳುವಾಗಲೆ ಮಾತು ಬಿಗಿದು ಬಿಟ್ಟೆ.

ನನ್ನ ಮಾತಾಗದಿರಲದಕೆ ಬಲೆಯು
ಹಿಡಿವ ಆಟವು ಆಗದಿರಲಿ ಕೊಲೆಯು
ಒಡಲ ನೂಲಿನ ಮೇಲೆ ಬಿದ್ದ ಇಬ್ಬನಿಯು
ಎಂಬಂತೆ ಮಿನುಗುತಿರಲೀ ಕಥಾಮಣಿಯು."

"ಕಥೆ ಆಯಿತೇ ಅಣ್ಣಾ, ಬಹಳ ಸಣ್ಣ
ಕಥೆಯ ಮೈಗಿಂತ ಮಿಗಿಲಿದರ ಬಣ್ಣ."

ಮಂಗಲೆಯೊಂದಿಗೆ । ಹಿಗ್ಗಾಯ್ತು ತಂದೆಗೆ ॥
ಕುಣುಸ್ಯಾಡಿ ಕೂಸಿಗೆ । ಅರಳಿಸಿ ಆಸೆಗೆ ॥
ರಾಗದ ಸಾಟಿಗೆ । ತೂಗ್ಯಾಡೊ ಥಾಟಿಗೆ ॥
ಒಲಿದಾಡೊ ರೀತಿಗೆ । ಹಾಡ್ಯಾನೊ ಗೀತಿಗೆ ॥
ಸಂಜೀಯು ಜಾವಿಗೆ । ಹೊರಟೇದಿ ಬಾವಿಗೆ ॥

ಸಂಜೀಯು ಜಾವಿಗೆ । ಹೊರಟೇದಿ ಬಾವಿಗೆ ॥
ಕಿರಗೀಯು ನೀರಿಗೆ । ಒದೆಯೂತ ದಾರಿಗೆ ॥
ಗೆಜ್ಜೀಯು ಗೆಜ್ಜಿಗೆ । ತಾಕ್ಯಾವ ಹೆಜ್ಜಿಗೆ ॥
ಏನಾರ ನಡಿಗೆ । ಯಾವೂರ ಹುಡಿಗೆ ॥
ಸಂಜೀಯು ಜಾವಿಗೆ । ಹೊರಟಾಳ ಬಾವಿಗೆ ॥

ಎರಡೂನು ಸಾಲಿಗೆ । ಹಾದ್ಯ್ಯದ್ದ ಬೇಲಿಗೆ ॥
ಗುಲಬಾಕ್ಷಿ-ಮಲ್ಲಿಗೆ । ಕೇಳ್ಯಾವೊ ಕಲ್ಲಿಗೆ ॥
“ ಕಳಿಸೋದೆ ನೀರಿಗೆ । ಇಂಥ ಸುಕುಮಾರಿಗೆ ॥
ಚಿಕ್ಕಿಚಾವಂಗಾಲಿಗೆ । ಮುಚ್ಚಂಜಿ ನಾಲಿಗೆ ” ॥
ಸಂಜೀಯು ಜಾವಿಗೆ । ಬಂದ್ಯಲ್ಲ ಬಾವಿಗೆ ॥

ಮಾತೀಗು ಆಚಿಗೆ । ಮೀರಿದ್ದ ನಾಚಿಗೆ ॥
ಮುಸುಕ್ಯಾವ ಹೂವಿಗೆ । ಬಂದೀಯೆ ಬಾವಿಗೆ ॥
ಗಿಲುಕೆಂಬೊ ಬಳಿಗೆ । ಕೆಲಸೊಂದು ಗಳಿಗೆ ॥
ಗೆಳತೇರ ಒಂದಿಗೆ । ಸೇದಿದೆ ಬಿಂದಿಗೆ ॥
ಸಂಜೀಯು ಜಾವಿಗೆ । ಬಂದೀಯೆ ಬಾವಿಗೆ ॥

ಮೂಗೀನ ನೇರಿಗೆ । ಹೊರಳೀದೆ ಊರಿಗೆ ॥
ತಲಿಮ್ಯಾಲೆ ಬಿಂದಿಗೆ । ಕಾಲಾಗ ಅಂದಿಗೆ ॥
ತುಂ ತುಮುಕು ತುಂಬಿದೆ । ಬಿಂದೀಗೆ ಅಂತಿದೆ ॥
ಝುಣ್‌ಝುಣ ಅಂದಿಗೆ । ಅಂದಾವ ಹೊಂದಿಗೆ ॥
ಸಂಜೀಯ ಜಾವಿಗೆ । ಹೋಗಿದ್ದೆ ಬಾವಿಗೆ ॥

ಒಂದೇನೆ ಬಾರಿಗೆ । ಹೋದೆ ಸೀ-ನೀರಿಗೆ ॥
ಬೆವರೀನ ಸಾರಿಗೆ । ತಂದೀದಿ ಯಾರಿಗೆ ॥
ಇಬ್ಬನಿ ಹೂವಿಗೆ । ನಸುಕೀನ ಜಾವಿಗೆ ॥
ಮುತ್ತನಿ ಮಾರಿಗೆ । ಮುತ್ಯಾವೊ ನಾರಿಗೆ ॥
ಸಂಜೀಯ ಜಾವಿಗೆ । ಹೋಗಿಯು ಬಾವಿಗೆ ॥

ಕೆಲಸಾನ ಆಟಿಗೆ । ಮಾಡೂವ ಸೂಟಿಗೆ ॥
ಹಸನಾದ ಧರತಿಗೆ । ಮೆಚ್ಚಿದೆ ಗರತಿಗೆ ॥
ಕುಣಿಸಿದೆ ಇಂದಿಗೆ । ಕಣ್ಬಿಟ್ಟ ಮಂದಿಗೆ ॥
ನೀವಾಳಿ ದಿಟ್ಟಿಗೆ । ಕಣ್ಣೆಲ್ಲ ಒಟ್ಟಿಗೆ ॥
ಸಂಜೀಯ ಜಾವಿಗೆ । ಹೋಗಿದ್ದ್ಯೆ ಬಾವಿಗೆ ॥

ಮಂಗಲೆಯೊಂದಿಗೆ । ಹಿಗ್ಗಾಯ್ತು ತಂದೆಗೆ ॥
ಕುಣಿಸ್ಯಾಡಿ ಕೂಸಿಗೆ । ಅರಳಿಸಿ ಆಸೆಗೆ ॥
ರಾಗದ ಸಾಟಿಗೆ । ತೂಗ್ಯಾಡೊ ಧಾಟಿಗೆ ॥
ಒಲಿದಾಡೊ ರೀತಿಗೆ । ಹಾಡ್ಯಾನ ಗೀತಿಗೆ ॥
ಸಂಜೀಯ ಜಾವಿಗೆ । ಹೊರಟೇದಿ ಬಾವಿಗೆ ।

# ಗಣ್ಯವ್ಯಕ್ತಿ-ಗೀತಗಳು . . .

೧. ತಂಗಿ ಜಾನಕಮ್ಮ
೨. ಸಂಭಾವನೆ
೩. ಪಂಚನಿಗೆ
೪. ಓ ರಾಜ್ಯಸಂನ್ಯಾಸಿ
೫. ಬುದ್ಧ

ತಂಗಿ ಜಾನಕಿ ನಿನ್ನ
ವೈದೇಹದೊಲವಿನಲಿ
ಓಲೆ ಬಂದಿತು ಒಂದು, ಇತ್ತ ತೇಲಿ
ಯಾರಿಗಾರೋ ಎನುವ
ನಾಸ್ತಿಕತೆಯನು ನೂಕಿ
ದಾಟ ದಿಕ್ಕಾಲಗಳ ಸುತ್ತು ಬೇಲಿ.

ಕವಿಯು ಮಾನಸಪುತ್ರ
ಅವನು ಆಗಸದೇಹಿ
ಮಾತಿನಲೆ ಮೂಡುವನು, ಭಾವಜೀವಿ.
ಮೈಯಾಚೆ ಉಸಿರಾಚೆ
ಬಗೆಯ ಬಣ್ಣಗಳಾಚೆ
ಅವನ ಹೂವರಳುವದು ಭಾವದೇವಿ.

ನೂರು ತಂಗಿಯರ ನಿ-
ರ್ನೆರದ ನೇಹದಿ ಮಿಂದು
ಮಿಂಚಿನಾಚೆಯ ಬೆಳಕ ಬಯಸಿ ಒಳಿದು
'ದೋಷರಾಹಿತ್ಯದಾ
ಕಲ್ಪನಾರಾಜ್ಯದೊಳು
ಸಗ್ಗದೂಟವನುಣುವ ರೂಪು ತಳೆದು.'

ಅದನು ನೀ ಕಂಡವಳು
ಬೇರೆ ಕಾಣಿಕೆಯೇಕೆ
ಕ್ಷೀರಸಾಗರದಲೆಯ ತಲೆಯ ಪೆರೆಯೇ
ಪೂರ್ಣಿಮಾ ದೃಷ್ಟಿಯಲಿ
ತೆರೆದೊಂದು ಸೃಷ್ಟಿಯಲಿ
ನಿನ್ನ ನಂದನಕೇನು ಮುಚ್ಚುಮರೆಯೇ.

ಝೇಂಕೃತದ ಸುಳಿ ಹಿಡಿದು
ಅಂತರಂಗಕೆ ನುಗ್ಗಿ
ಕಮಲವನವಲ್ಲಿ ನಿಃಸ್ಸೀಮವಹುದು
ಭಾವಶಿಖರಗಳಲ್ಲೆ
ಜೀವಪುರ ನೆಲಸಿಹುದು
ಅದನು ನೀ ವೈದೇಹಿ ಕಾಣಬಹುದು.

ವಿಷಯ ವಿಷ ವಿಷಮವನು
ತಳ್ಳಿ ಪದತಲದಾಚೆ
ಸಪ್ತಸ್ವರ್ಗವ ಸೀಳಿ ಮೇಲೆ ಹಾರು
ಅಲ್ಲಿರುವ ನಲಿವೊಲವು
ಇಲ್ಲಿರುವ ಬಲ ಚೆಲುವು
ಮಿಕ್ಕ ಸೂಸುವ ಹಾಗೆ ಜಗಕೆ ಸಾರು.

## ೧೪ . . . ಸಂಭಾವನೆ

ಕನ್ನಡದ ಶ್ರೀಕಂಠದಿಂದ ಸಾರಿದ ವಾಣಿ
ಅಂದು ವೀಣಾಪಾಣಿಯಾಗಿ ಬಾಜಿಸಲಾಗಿ
ಆ ರಾಗವೇ ಜನದ ಅನುರಾಗವೆನೆ ಮಾಗಿ
ರಾರಾಜಿಸುವದಿಂದು ರಾಷ್ಟ್ರಹೃದಯದ ರಾಣಿ
ಆ ಪ್ರಗಾಥದ ವಾಣಿ ನಾಡನೌಕೆಯ ನೂಗಿ
ಧ್ರುವಪ್ರವಾಸಕೆ ದಿಕ್ಕುಗಾಣಿಸುವ ಚುಕ್ಕಾಣಿ-
ಯಾಗೆಯುದ ಹೇಳುವೊಬ್ಬೊಬ್ಬ ಕನ್ನಡ ಮಾಣಿ
ಮೆರೆವನಗೊ, ನಾಡನಂಬುಗೆಯ ಅಂಬಿಗನಾಗಿ.

ಇಂಥ ಉಜ್ವಲ ಚಿತ್ರದೊಂದು ಕೀರ್ತಿಪ್ರಭೆಗೆ
ಕಳೆಕಟ್ಟಬೇಡವೇ ಶ್ಯಾಮಶೀವಾರೇಖೆ
ಎನೆ, ಅದರ ಹಿಂದೆ ನೆಳಲಾಗಿ ನೆಲಸಿದೆ ಛಾಯೆ
'ಇದುವೆ ಸಂಭಾವನೆಯೆ ನಿನ್ನ ಸೇವೆಗೆ ತಾಯೆ ?'
ಎಂಬ ಪ್ರಶ್ನೆಗೆ ಬಾನದನಿಯು ಸಾರಿತು ಸಭೆಗೆ
'ವಿಷ ನುಂಗೆ ಶ್ರೀಕಂಠ, ಬೇರೆ ಭೂಷಣ ಬೇಕೆ ?'

ಶ್ರೀಲಲಿತ-ಮಾಧುರ್ಯ-ಸೌಂದರ್ಯ-ಗಾಂಭೀರ್ಯ
ದೆಸಕದಿಂದೆಸಗಿ ಕಾವ್ಯಪ್ರೌಢಿಯಲಿ ಮೆರೆದು
ನಿನ್ನ ಸಾಸಿರ ಕರದ ಕರ ಚೆಲುವಿನಲಿ ಬರೆದು
ಕನ್ನಡದ ಸವಿನುಡಿಯ ಬಾನ ಬೆಳಗುವ ಸೂರ್ಯ
ಈಗಳೂ ನಡೆದಿಹುದು ಕವಿಯೆ ನಡಸಿದ ಕಾರ್ಯ
ನಿನ್ನ ನವರಸದ ತವನಿಧಿ ಜಲಧಿಯೊಲು ಮೊರೆದು
ಸುಮನಸರ ಸೌಮನಸ್ಯದ ಸುಮನಗಳ ಕರೆದು
ಇಂದಿಗೂ ಮೊಳಗುತಿದೆ ದಿವ್ಯದುಂದುಭಿ ತೂರ್ಯ.

ಪಸರಿಸಿದ ಮುಸಳಿಸಿದ ಮತ್ತೆ ಪಸರಿಸಲಿರುವ
ನಿನ್ನ ಪುಟವಹಸಾಜಮಾದ ಪುಲಗಿರಿಯ ತಿರುಳು-
ಗನ್ನಡಕೆ ದೆಸೆದೆಸೆಯ ದೇಸಿಗನ್ನಡ ಬರುವ
ಒಸಗೆ ಬೀರಲಿ ಅಚ್ಚಕೆಚ್ಚು ಕನ್ನಡ ಹುರುಳು
ಇಹ-ಪರ-ಮಹಾನುಭಾವ ವ್ಯಂಜನೆಗೆ ಸಾಕು
ಕನ್ನಡವು ಕನ್ನಡವ ಕನ್ನಡಿಸುತಿರಬೇಕು.

ಓ ರಾಜ್ಯಸಂನ್ಯಾಸಿ, ಜನಗಹನ ವನವಾಸಿ
ನೀನು ಪೌರುಷವಂತನೆನಲೊ, ದೈವದ ಶರಣ !
ನಿನ್ನ ಕೀರ್ತಿಯ ಕಿರಣ ಸಾರಿ ಸತ್ತಿತು ಮರಣ.
ಏನು ನಿನ್ನಾ ಮಾರ್ಗ—ನಿನ್ನದೇ ಆ ದೇಸಿ.
ಅಪಜಯದ ಹೆಂಟೆಗಳನ್ನಿಟ್ಟು ಒಟ್ಟಿಗೆ ಸುಟ್ಟಿ
ನೀನು ಅಗಿಯದ ನರಕವಿಲ್ಲ, ಮುಱಿಯದ ಕಟ್ಟಿ
ದಿತಿಯ ಸಂತತಿಯಿಂದ ಆಯ್ತು ಮೂರಾಬಟ್ಟಿ
ಅಲ್ಲಿಯೂ ನಿನ್ನ ವಿಜಯಸ್ತಂಭ ನೀನೆಟ್ಟಿ.

ಆದರಿದು ಚಿತ್ರ, ಓಹೋ ಮರೆತೆ; ಈ ಮಾಯೆ
ಕನ್ನಡಕಗಳ ಹಿಂದೆ ಕಣ್ಣಿನಾಚೆಗೆ ಸಾಗಿ
ಗಗನಗಮನವಗೈವ ಆ ವಿವೇಹದ ಛಾಯೆ
ರೋಮರೋಮದಿ ಕಣ್ಣ ತೆರೆವ ಜೀವನ-ರೇಖೆ
ಇರಲು, ಬಣ್ಣಿಸಲೇಕೆ ? ಬೇರೆ ಮಾತೇ ಬೇಕೆ ?
ಚಿತ್ರಿಕನ ಕೃತಿಗಾಗಿ, ಸುಂದರಾಕೃತಿಗಾಗಿ.

ಬುದ್ಧ, ಬುದ್ಧ—
ಜಗವೆಲ್ಲ ಮಲಗಿರಲು ಇವನೊಬ್ಬನೆದ್ದ
ಮಡದಿ ಮಗು ಮನೆ-ಮಾರು ರಾಜ್ಯ-ಗೀಜ್ಯ
ಹೊತ್ತಿರುವ ಉರಿಯಲ್ಲಿ ಆಯಿತಾಜ್ಯ
ಹಿಂದೆ ಬಿದ್ದವು ಎಲ್ಲೊ ಕುದುರೆ ಕಾಲಾಳು
ಬಿಚ್ಚಿ ಉದಿರಿತು ಎಲ್ಲೊ ಮನದ ಬಾಳು
ಹೊರಟ ಹೊರಟೇ ಹೊರಟ, ಹೊರಟನೆತ್ತೋ
ಸಾಹಸಿಯು ಗೊತ್ತುಗುರಿ ಅವಗು ಗೊತ್ತೋ!

ಕಾಮ-ಕ್ರೋಧವ ದಾಟಿ, ಮದ-ಮತ್ಸರವ ತುಳಿದು
ಮೋಹ-ಲೋಭವ ಮೆಟ್ಟಿ ಅಡಿ ಕಿತ್ತಿ ಇಟ್ಟ,
ಇದೊ ತಗ್ಗು, ಅದೊ ಗುಡ್ಡ, ಅಗೊ ಸಾಲೆಯ ಬೆಟ್ಟ
ನೆಲ ತೆಳಗೆ ಬಿಟ್ಟ.

ಏರಿದೇರಿದನೇರಿ ಗಾಳಿಗುದುರೆ ಸವಾರಿ
ಚಂದ್ರಕಿರಣವ ಮೀರಿ ಸೂರ್ಯ ಸೇರಿ
ಬೆಳಕನ್ನೆ ಹಿಂದೊಗೆದು ತಮದ ಬಸಿರನೆ ಬಗೆದು
ಅಸ್ಪರ್ಶ ಅವಕಾಶದಲ್ಲಿ ಇದ್ದ.
ಬುದ್ಧ–ಬುದ್ಧ-ಬುದ್ಧ
ಶಬ್ದ–ನಾದ ಧ್ವನಿಯು ಸದ್ದ ಮೀರಿದ್ದ.
ಇಲ್ಲ ಎಂಬುವ ಕೊನೆಗೆ ಆತ್ಮ ಶುದ್ಧ
ಇದ್ದರೇನಿಲದಿದ್ದರೇನೆನಲು ಗೆದ್ದ.

ಅಲ್ಲಿಂದ ಇಲ್ಲಿವರೆ ಹೊರಳಿ ನೋಡಿ
ಇದ್ದುದಿದ್ದಂತಿತ್ತು ಜನನ-ಮರಣದ ಜೋಡಿ
ಗೆದ್ದುದೇನೆಂದೆನುತ ಮರಳಿ ಜಿಗಿದ
ಭೂತಜಾತದ ಎದೆಯ ಸೀಳಿ ಸಿಗಿದ
ಅದೆ ತನ್ನ ಮನೆಯೆಂದು ಸಿದ್ಧ ಬಗೆದ.

ಬುದ್ಧನೆಂಬುವ ಒಬ್ಬ ಎಂದೊ ಇದ್ದ
ಎನುವಂತೆ ಇಂದಿಗೂ ಇಲ್ಲೆ ಇಲ್ಲ
ಬುದ್ಧ ಹುಟ್ಟಿದ ಮೇಲೆ ಹಳೆ ಜಗವು ಸತ್ತು
ಇದ್ದು ಇಲ್ಲದ ಹಾಗೆ, ಹಾಗೆ ಇತ್ತು.
ಬುದ್ಧ ಸತ್ತನು ಎಂದು ಯಾರೆಂದರೂ
ಬುದ್ಧನ ಜಯಂತಿಗಿದೆ ಜಯವೆಂದಿಗೂ
ಬುದ್ಧನ ಸಮಾಧಿಯದು ಮಾನವನ ಹೃದಯ
ಅದುವೆ ಕಾಯುತ್ತಲಿದೆ ಕಲ್ಕಿ ಉದಯ.

## ದೇಶ : ಸಮಾಜ . . . .

೧. ಒಂದೇ ಕರ್ನಾಟಕ

೨. ನೀವಾರಲಾ !

೩. ಸಿದ್ಧರಾಮರ ವಚನವನ್ನು ನೆನೆದು

೪. ಪಡುವ-ಕಡಲ ಅಂಬಿಗರ ಹಾಡು

೫. ಬಂದಿಕಾರಾ ಶ್ರಾವಣಾ

೬. ಅನ್ನಯಜ್ಞ

೭. ನರ್ಸ

ಒಂದೇ ಒಂದೇ ಒಂದೇ ಕರ್ನಾಟಕ ಒಂದೇ !

ಇಂದೇ ಮುಂದೇ ಎಂದೇ ಕರ್ನಾಟಕ ಒಂದೇ
ಜಗದೇಳಿಗೆಯಾಗುವದಿದೆ ಕರ್ನಾಟಕದಿಂದೆ ||
ಇಲ್ಲಿಯ ಜನ-ಮನ-ಭಾಷೆಯು ಕನ್ನಡವದು ಒಂದೇ
ಒಂದೇ ಜನವೂ ಒಂದೇ ಮನವೂ ಕನ್ನಡಿಗರು ಎಂದೇ
ಕುಲವೊಂದೇ ಸ್ಥಲವೊಂದೇ ನೀತಿಯ ನೆಲೆಯೊಂದೇ
ಹೀಗೆನ್ನದ ಹೆರವರು ಅವರಿದ್ದರು ಒಂದೇ
ಇರದಿದ್ದರು ಒಂದೇ !
ಕನ್ನಡವೆಂದೂ ಒಪ್ಪದು ಕರ್ನಾಟಕ ನಿಂದೇ
ಒಂದೇ ಒಂದೇ ಒಂದೇ ಕರ್ನಾಟಕ ಒಂದೇ || ೧ ||

ಕನ್ನಡ ಮಾತೇ ಮಾತೆಯು, ಕರ್ನಾಟಕ ಒಂದೇ
ಅದು ದೈವತ ಅದು ಜೀವಿತ ಒಪ್ಪಿಹೆವದುವೆಂದೇ
ನಮ್ಮದು ನಿಮ್ಮದು ಅವರದು ಈ ಆಸ್ತೀಪಾಸ್ತೀ.
ನಾಡಿನ ತಾಯಿಗೆ ಸೇರಿದೆ, ಬೇರೆಯು ಮನೆ ನಾಸ್ತೀ
ಕನ್ನಡ ಕಾಯಕದಲ್ಲಿಲ್ಲವು ಕಮ್ಮೀಜಾಸ್ತೀ ||
ಇದನೊಪ್ಪದ ಹೆರವರು ಅವರಿದ್ದರು ಒಂದೇ
ಇರದಿದ್ದರು ಒಂದೇ !
ಕರ್ನಾಟಕ ಹಿತ-ವಿಹಿತವು ಕನ್ನಡ-ಕುಲದಿಂದೇ
ಒಂದೇ ಒಂದೇ ಒಂದೇ ಕರ್ನಾಟಕ ಒಂದೇ || ೨ ||

ಕನ್ನಡವೂ ಭಾರತವೂ ಜಗವೆಲ್ಲವು ಒಂದೇ
ತುಂಬಿದೆ ಕನ್ನಡ ಕುಲವನ್ನೊಪ್ಪುವ ಕುಲದಿಂದೇ
ಕನ್ನಡ ದೀಕ್ಷೆಯ ಹೊಂದಿದ ಪ್ರತಿಯೊಬ್ಬನು ಆರ್ಯ
ಕನ್ನಡ ತೇಜವು ಸಾರಲಿ ಕನ್ನಡಿಗರ ಕಾರ್ಯ
ಕನ್ನಡ ನಡೆ ಇರದವರೇ ಶೂದ್ರರು ಅನಿವಾರ್ಯ
ಇಂತರಿಯದ ಹೆರವರು ಅವರಿದ್ದರು ಒಂದೇ
ಇರದಿದ್ದರು ಒಂದೇ !
ಉಗ್ಗಡಿಸಿರಿ ನಾಸ್ತಿಗೆ ಜಯ ಜಯ ಜಯ ಜಯವೆಂದೇ
ಒಂದೇ ಒಂದೇ ಒಂದೇ ಕರ್ನಾಟಕ ಒಂದೇ ! || ೩ ||

# ೧೯ . . . . ನೀವಾರಲಾ !

ನೀವಾರಲಾ ನೀವಾರಲಾ ನೀವಾರಲಾs
ಯಾರೋs ಯಾರೋs........

ನೀವು ತುಳಿವೀ ತೊಡೆಗಳೋ
ನಿಮ್ಮೆಡೆಗಳೋ !
ನೀವು ಆಡುವ ಬಾಯಿಯೋ
ಅದೆ ತಾಯಿಯೋ !
ನೀವು ಅಪ್ಪುವ ತೋಳೊಳೇ
ನೀವು ಬದುಕುವ ಬಾಳೊಳೇ
ತಾಯಿ-ಎದೆ ತುಂಬಿರುವದಣ್ಣಾ
ಬರಿದೆ ಮರುಗುವಿರೇತಕೆ
ಬನ್ನಿ ತಾಯಿಯ ಜೀತಕೆ
ಮೆಟ್ಟಿ ನಡೆದುದೆ ಕನ್ನಡ
ಮುಟ್ಟಿ ನುಡಿದುದೆ ಕನ್ನಡ
ಮಾಡಿರಯ್ಯಾ ಮಾಟವಾ
ಹೂಡಿರೋ ಹೊಸ ಆಟವಾ—
ನೀವಾರಲಾ ನೀವಾರಲಾ
ಯಾರೋs ಯಾರೋs....

ವರಯತೀಶ್ವರ ಸಂಗವೋ ! ಆ-
ನಂದತೀರ್ಥರ ಲಿಂಗವೋ ! ಬಸ-
ವಣ್ಣನವರಾ ಲಿಂಗವೋ !
ಪೂಜ್ಯಪಾದರನಂಗವು
ಶಂಕರನ ನಿಃಸಂಗವು

ಬಂತೆ ಎಲ್ಲಕು ಭಂಗವುಃ ?
ಹೊಲೆಯ ಕಳೆವನು ಹೊಲೆಯನೇ ?
ನೆಲದ ಮಗ ಒಕ್ಕಲಿಗನೇ ?
ದುಡಿದು ಬದುಕುವ ಬಡವನೇ ?
ಏನು ನುಡಿವಿರಿ? ಎಂತೆ ನಡೆವಿರಿ !
ರಸವು ಇದ್ದುದೇ ಹೃದಯವ್ರೋ !
ಇಳೆಯ ದೈವವು ಸದಯವ್ರೋ !
ನೀವಾರಲಾ ನೀವಾರಲಾ
ಯಾರೋಃ ಯಾರೋಃ....

ಬಾಯ್ತುಂಬಿ ನುಡಿಯುವ ಬ್ರಹ್ಮವು
ಕಾಲ್ ಕೈಗು ಕುಣಿಯುವ ಕರ್ಮವು
ಮೈದುಂಬಿ ತುಡಿಯುವ ಧರ್ಮವು
ಅವು ನಮ್ಮವ್ರೋಃ ಅವು ನಿಮ್ಮವ್ರೋಃ
ಜೀವ ನರ್ತಿಸಿ ನಡೆಯಿರಿ
ಹೃದಯ ಮೂರ್ತಿಸಿ ನುಡಿಯಿರಿ
ದಿವ್ಯ ಲಯವನೆ ಹಿಡಿಯಿರಿ.
ಎಲ್ಲೆ ಎಲ್ಲಿವೆ ನಾಡಿಗೆ ?
ರಾಗ ಬೇರೆಯೆ ಹಾಡಿಗೆ ?
ಕಾಯಿ ಬಂದಿವೆ ಪಾಡಿಗೆ.
ತಮಿಳರಣ್ಣಾ ತೆಲಗುತಮ್ಮಾ ಕೇರಳದ ಕಿರಿಸೋದರಾ
ಆರದಿರಲ್ಯೆ ಆದರಾ
ಮಹರಾಷ್ಟ್ರನಿರು ನೀನುತ್ತರಾ
ನೆರೆಹೊರೆಯಾಗಲಿ ಹತ್ತಿರಾ

ಬೆಳೆಸೋಣ ಇಬ್ಬರ ಎತ್ತರಾ
ಪಕ್ಕಕಿರಲೀ ಕೊಂಕಣಾ
ಕೊಡುಗ ತುಳುವರು ತೆಂಕಣಾ
ಬಡಗ ತೊದವ ಕುರುಂಬ ಇರುಳರು
ಕೈಗೆ ಕಟ್ಟಲಿ ಕಂಕಣಾ
ಹಿಂದಿಯವನೂ
ಮುಂದಿಯವನೇ !
ಅವನು ಎಲ್ಲರ ಬಂಧುವು
ಸ್ವೈರವೇ ಸ್ವಚ್ಛಂದವು ?
ನಡುವೆ ಕನ್ನಡ ಬಾಳಲಾ
ಆಳುವವನೇ ಆಳಲಾ
ನಾಟ್ಯ ನಡೆದಿದೆ ತಾಳಲಾ
ಸೀವಾರಲಾ ಸೀವಾರಲಾ
ಯಾರೋಃ ಯಾರೋಃ....

ಎಲ್ಲೊ ಇದೆ ಅರವಿಂದವು
ನೆಲಕೆ ಗಮಗಮ ಗಂಧವು
ಜೀವದೊಳು ಜಿನಬಂಧವು
ತಾಯಿ-ಬಾಳಿನ ಛಂದವು
ಪಂಪನೇ ರತ್ನಾಕರಾ
ಸರ್ವಜ್ಞಪ್ರಭುವೇ ಹರಿಹರಾ
ಶುಕರೂಪ ವಿಠಲಪುರಂದರಾ

ಜಯವು ಗರತಿಯ ಹಾಡಿಗೇ
ಕಲ್ಪಿ ಶಿಲ್ಪಿಯ ಗಾಡಿಗೇ
ಕಲ್ಲು ಹಾಡಿದ ನಾಡಿಗೇ !
(ಹಗೆಯು ಆಗಲಿ ಕಾಡಿಗೆ)
ಕರ್ತಾರ ಹಾಕಿದ ಕಮ್ಮಟಾ
ಚಾಮುಂಡರಾಯನ ಗೊಮ್ಮಟಾ
ತವ ನಿಧಿಯ ಹಾಗೆಯೆ ತೀಯಲಿ
ವಿರಲವೆಂಕಟ ಮಲ್ಲಿಕಾರ್ಜುನ
ಕೃಷ್ಣ ಮಹಬಲ ಕಾಯಲಿ
ಅಸುರ ದುರ್ಗುಣ ಸಾಯಲಿ
ಮರ್ಯಾದೆ ಮೀರದೆ ನಡೆಯಿರಿ
ವಿಶ್ವತಾಳವ ಹಿಡಿಯಿರಿ
ಬೇಡ ಸೀಮಾಭಂಗವು
ಎಲ್ಲೆಡೆಗು ಶಿವಲಿಂಗವು
ರುದ್ರಭೂಮಿಯ ಭಸಿತಕೇತಕೆ
ಹಸಿದು ಕಿಸಿವಿರಿ ಬಾಯನು ?•
ನೋಡಿ, ನಡುಗುವ ತಾಯನು.
ನೀವಾರಲಾ ನೀವಾರಲಾ
ಯಾರೋಽ ಯಾರೋಽ.....

# ೨೦. · ಸಿದ್ಧರಾಮರ ವಚನವನ್ನು ನೆನೆದು

" ಕಲಿಕಾಲ ಕೆಟ್ಟದ್ದು, ನರರು ಸುರರಸುರರಿಗಿಂತ
ಬಲ್ಲಿದರು. ಆದ್ದರಿಂದ ಈ ಕ್ಷೇತ್ರದಲ್ಲಿ ಇದ್ದೂ
ಇಲ್ಲದಂತೆ ಸಮಾಧಿಯಲ್ಲಿ ನಿಲ್ಲುವೆನು."

—ಸಿದ್ಧರಾಮ ಪುರಾಣ

(ಸಂ. ೯. ಪದ್ಯ ೫೩)

ಇದ್ದು ಇಲ್ಲದ ಹಾಗೆ ಇರುವೆನೆಂಬಿರಿ ತಂದೆ
ಗದ್ದುಗೆಯನೇರುವದದೆಂದು ಹೇಳಿ?
ತಮ್ಮ ಹಿರಿಕೆರೆಯಲ್ಲಿ ಕಮಲವರಳುತ್ತಿಲ್ಲ.
ಮತ್ತೆ ಕಾಣುವದೆಂದು ಭಕ್ತಕೇಳಿ?

ತಮ್ಮಲ್ಲಿ ಸೊನ್ನಲಿಗೆ ಸೊನ್ನಲಿಗೆಯಲಿ ತಾವು
ಹೀಗಿದ್ದು ಬರಿ ಹೊನ್ನೆ ಹೊಳೆಯುತಿಹುದು.
ಹೊನ್ನಿನಲಿ ಹುದುಗಿದ್ದ ಸಿದ್ಧಹಸ್ತದ ಅಭಯ
ಬಡತನವನಷ್ಟನೇ ತೊಳೆಯುತಿಹುದು.

ತೋಟದೊಳಗೆತ್ತಲೂ ಆರಾಮವೆನಿಸಿದರು
ಸಿದ್ಧರಾಮನ ಸೊಲ್ಲು ಕೇಳುತಿಲ್ಲ.
ತಮ್ಮ, ತಮ್ಮವರ, ತಮ್ಮಂಥವರ ಕತೆವಚನ
ಹನ್ನೆರಡು ತಿಂಗಳೂ ಹೇಳುತಿಲ್ಲ.

ಧೂಳಿಮಾಕಾಳನೇ ವೈಗೊಂಡು ಬೀಸುತಿರೆ
ನಿಮ್ಮ ಬೇವೇ ತಂಪು ಸೂಸುತಿರಲು
ಬಿಸಿಲೆಷ್ಟು ಕಾದೀತು ಬೆವರೆಷ್ಟು ಹೋದೀತು
ನಿಮ್ಮ ಕೆರೆಯೇ ಮೈಯ ಮೀಸುತಿರಲು

ಆದರೂ ತಮ್ಮ ಕಣ್ ತಮ್ಮ ಕೈ ತಮ್ಮಂತ್ರ
ಕಣ್ತುಂಬಿ ತಲೆದುಂಬಿ ಕಿವಿಯ ತುಂಬಿ
ಬರದಿರಲು, ಹೊಳೆದೀತು ಲಿಂಗಕಾಂತಿಯದೆಂತು
ಕಲ್ಲನ್ನೊ ಕಣಿಗಿಲನೊ ಬರಿದೆ ನಂಬಿ ?

ಏಕತಾರಿಯು ಏಕನಾದದಂದದಿ ಮಿಡಿದು
ನುಡಿಯದಿರೆ ಹಗಲಿರುಳು ಪ್ರಾಣತಂತು
ನಿಮ್ಮ ಶರಣರ ಬಿಂಬ ಕಣ್ಣಿನಲಿ ಕಳೆಗೊಂಡು
ಮಿಂಚೀತು ಎದೆಯಲಿ ತ್ರಿಶೂಲವೆಂತು ?

ಭಾಗ್ಯನಗರದ ಭಾಷೆ ಪುಣ್ಯನಗರಿಯ ಭಾಷೆ
ಬೆಂಗಳೂರಿನ ಭಾಷೆ ಬೆಳಗುತಿರಲು
ಸೊನ್ನಲಿಗೆಯಲಿ ಮೂರು ಸೇರಿ ಮುಪ್ಪುರಿಗೊಂಡು
ಒಪ್ಪೀತೆ ಎಂದಾರೆ ತೊಳಗದಿರಲು !

ವಿದ್ಯೆಗೆತ್ತಿದ ಕೈಯು ಬುದ್ಧಿಗೆತ್ತಿದ ಕೈಯು
ಕರಿಹೊಲದ ಅರಳಿ ಹೂವಾಗಿಕೊಂಡು
ಮಲ್ಲಯ್ಯ ನೆಟ್ಟಿರುವ ಸಿದ್ಧ ದೀಪಸ್ತಂಭ-
ವೆಂಬಂತೆ ನಾಲ್ಕುದೆಸೆ ತಾಗಿಕೊಂಡು.

ಹೊನ್ನೆಂಬ ಹೆಣ್ಣೆಂಬ ಮಣ್ಣೆಂಬ ಮೆಟ್ಟಿಲವ
ಮೀರಿ ಕಟ್ಟಿದ ಪುರವು ಮೆರೆವುದೆಂದು ?
ಎದೆಯಲ್ಲಿ ಸುಧೆಯಾಗಿ ನಿಮ್ಮ ವಚನಾಮೃತವು
ಕಣ್ಣಿಗಂಜನವಾಗಿ ತೆರೆವುದೆಂದು ?

ರೇವಣರು ಮೆಟ್ಟಿದ್ದ ಸ್ಥಳವೀಗು ಹಸುರೆಯಿದೆ
ಮಲ್ಲಯ್ಯನೆಡೆಗೀಗು ಕಾಂತಿಯಿಹುದು.
ತಾವು ಕಟ್ಟಿಸಿದ ಕೆರೆ ಈಗಲೂ ಬತ್ತದಿದೆ
ಪ್ರಭುಪಾದ ಮುಟ್ಟಿದೆಡೆ ಶಾಂತಿಯಿಹುದು.

ಆದರೇನೆಲ್ಲೆಲ್ಲು ಗುಂಭಮೌನವೆ ತುಂಬಿ
ಮೂಢನ ಸಮಾಧಿಯೊಲು ಕತ್ತಲಿಸಿದೆ
ವೈಭವಕೆ ಕಳೆಯಿಲ್ಲ ಜ್ಞಾನಕ್ಕೆ ಬೆಳೆಯಿಲ್ಲ
ಅಜ್ಞಾನವೇ ಸುತ್ತ ಬತ್ತಲಿಸಿದೆ.

ಈ ತಮ್ಮ ನೆಲೆವೀಡು ಸಿದ್ಧರಸಗಳ ಬೀಡು
ಎಂದು ಕಬ್ಬಿಣವನ್ನು ಹೊನ್ನಿಗೊಳಿಸಿ
ಬೆಳವೊಲವ ಮೆರೆಸಿ ಮೆರೆಯುವದು ಸಿಂಗರವಾಗಿ
ಸೊನ್ನಲಿಗೆ ಎಂಬುದನು ನನ್ನಿಗೊಳಿಸಿ ?

ದೇಹ-ದೇವಾಲಯದಿ ಪ್ರಾಣಲಿಂಗಗಳಿಲ್ಲ
ಮನದ ಕೆರೆ-ಕಾಲುವೆಗೆ ಕಟ್ಟೆಯಿಲ್ಲ.
ಚಿತ್ತಗಳ ಬಿತ್ತಿಲ್ಲ, ಸಂಕಲ್ಪ ಹೊತ್ತಿಲ್ಲ
ಹಳೆಯ ಆಶ್ರಯವೀಗು ಬಿಟ್ಟೆಯಿಲ್ಲ.

ವಿಠ್ಠಲನ ಮುದ್ರೆಯಲಿ ಭಕ್ತಿ ನೆರೆಯೊಳಗಿಹುದು
ಶಕ್ತಿ ಭಂಡಾರದಲಿ ಮರೆಯೊಳಿಹುದು.
ದತ್ತಪಾದಗಳಲ್ಲಿ ಗುಪ್ತ ಒಳಗಿಳಿದಿಹುದು.
ಸಂಗಮ ವಿಭೂತಿಯಲಿ ತೆರೆಯೊಳಿಹುದು.

ಗಿರಣಿಗಳ ಧೂಮ-ಧೂಸರಿತ ಬಾಂದಳದಲ್ಲಿ
ಎಂದು ಮೆರೆವುದೊ ನಿಮ್ಮ ತ್ಯಾಗಧ್ವಜವು !
ಮಣ್ಣಿನೀ ಮಕ್ಕಳನು ಬಂದು ಪೊರೆವುದು ಎಂದು
ಭೂತದಯೆಯಲಿ ಬಲಿತ ನಿಮ್ಮ ಭುಜವು ?

ಅಕ್ಕಗಳು ಅವ್ವಗಳು ವಚನರಚನೆಯ ಬಿಚ್ಚಿ
ನಾಲಿಗೆಯ ನೆಲಗಳಲಿ ಬಿತ್ತುತಿರಲು
ಅಪ್ಪಗಳು ಅಯ್ಯಗಳು ಮೂಕರಾಗಿಹರೇಕೊ
ಕನ್ನಡದ ಗುಡಿ ಮತ್ತೆ ಎತ್ತುತಿರಲು.

ಸಾಧು-ಸಂತರ ವಾಣಿ ಭಕ್ತ-ದಾಸರ ವೀಣೆ
ಶರಣರಾವರಣಕ್ಕೆ ಮೊರೆಯುತ್ತಿದೆ.
ಬಾನುಲಿ ವಿಮಾನಗಳ ಠಂಕಾರರವದಲ್ಲಿ
ಯಾವುದೋ ಓಂಕಾರ ಬೆರೆಯುತ್ತಿದೆ.

ಕನ್ನಡದ ಸೀಮೆಯಲಿ ಮುನ್ನಡೆಯ ಹೆಜ್ಜೆಯಲಿ
ವಿಶ್ವಮೈತ್ರಿಯ ಮೋಡಿ ಮೂಡಲುಂಟು.
ರೋಷ-ಸಂತೋಷಗಳ ಮಲ್ಲಗಾಳಿಗದಲ್ಲಿ
ಎದೆಯ ಕಾವಳಮಬ್ಬು ಓಡಲುಂಟು.

ಪಡುವಲದ ಕೆನ್ನೀರ ತಳಿಯಲ್ಲಿ ಮುಳುಗಿದನು
ಕೆಂಡ ಕಾರುತ್ತ ಪ್ರೋಚ್ಚಂಡ ರವಿಯು
ಮೂಡಲದ ಮುಂಗಾಲು ಮೂಡಿದೊಡನೆಯೆ ಹಕ್ಕಿ
ಪಕ್ಕಿಗಳ ಒಡನೆಯೇ ಎದ್ದ ಕವಿಯು.

ಸಿದ್ಧರಾಮನ ಕರುಣೆ ಸಾಕಾರವಾದಂತೆ
ಏಳು ಹೊಳೆಗಳ ನಾಡು ಏಳುತಿಹುದು
ದಿಕ್ತಟಕೆ ಮುದ್ದಿಟ್ಟು ಬರುವ ಸಂಗೀತವನು
ಜೀವವೇ ಕಿವಿಯಾಗಿ ಕೇಳುತಿಹುದು.

ಏಳಿ ಜೀವದ ಮೇಳ ಕೇಳಿ ಭಾವದ ತಾಳ
ದಿವ್ಯಲಯದಲಿ ಬರುವ ಭವ್ಯರಾಗ
ಎಲ್ಲರೊಳಗಿಹನೊಬ್ಬ ಅವನು ಕಟ್ಟಿದ ಕಬ್ಬ
ಕರೆಯಲಿದೆ ಹಾಲನ್ನು ಕುಡಿಯಿರಾಗ.

# ಪಡುವಲ ಕಡಲ ಅಂಬಿಗರ ಹಾಡು



ಏ। ಲೇಲಾಲಿ ಲೇಸೋ। ಲೇಲಾಲಿ ಲೋ.

ಕಡಲೀನ ನಡಿಗೆಗೆ ಹಾಡುವೆನೋ।
ತೆರೆಗಳ ಲೀಲೆಯ ನೋಡುವೆನೋ।
ಗಾಳೀಯ ಛಂದಕೆ ತೂಗುವೆನೋ।
ಮುಂದಽಕೆ ಮುಂದಕೆ ನೂಗುವೆನೋ।
ಏ। ಲೇಲಾಲಿ........

ಪಡುವಲ ಕಡಲಿದು ಏನಂದವೋ।
ಉಕ್ಕೇರಿ ಬರುತಿದೆ ಆನಂದವೋ।
ಬಂಧನ ಬಂದಿತು ಇಲ್ಲಿಂದಲೋ।
ಬಿಡುಗಡೆ ಇಂದೂನು ಇಲ್ಲಿಂದಲೋ।
ಏ। ಲೇಲಾಲಿ........

ದಿನದಿನ ಬಹನಿಲ್ಲಿ ರವಿ ಶಾಂತಿಗೆ।
ದಣಿವಾಗಿ ತಣಿಗಾಗಿ ವಿಶ್ರಾಂತಿಗೆ।
ಶ್ರೀಗಂಧ ಚಂದನ ಯಾಲಕ್ಕಿಗೆ।
ಬಂದವು ಏನೇನೋ ಈ ದಿಕ್ಕಿಗೆ।
ಏ। ಲೇಲಾಲಿ........

ಮುತ್ತೇನು ಮೆಣಸೇನು ಲಾವಂಗವೋ।
ಕುದುರೇನು ಹವಳೇನು ಅಬರಂಗವೋ।
ಬೇಹಾರ ಆಹಾರ ಸಂಹಾರವು।
ಮತಮೂಢ ಹುಂಕಾರ ಠಂಕಾರವು।
ಏ। ಲೇಲಾಲಿ........

ಬರುತಿತ್ತು ಸಂಪತ್ತು ದಿನ ಸಂಜೆಗೆ।
ಈಗಿಲ್ಲಿ ದಿಕ್ಕಿಲ್ಲ ನೀರ್ಗಂಜಿಗೆ।
ಹೀಗಾದರೂ ಏನು ನಯನೀತಿಗೆ।
ಈಗಲು ಸರಿ ಯಾರು ಈ ಜಾತಿಗೆ।
ಏ। ಲೇಲಾಲಿ........

ಒಪ್ಪಾಗಿ ಉಪ್ಪಾಗಿ ಈ ಚೀಲವೂ।
ತರುತಿದೆ ಸುಖ-ದುಃಖ ಸಮ್ಮೇಳವು।
ಬಂದುದು ಬರಲೆನ್ನಿ ನಮ್ಮೊಟ್ಟಿಗೆ।
ಹೊಡೆಯಿರಿ ಕಡೆಯಿರಿ ಈ ನಿಟ್ಟಿಗೆ।
ಏ। ಲೇಲಾಲಿ........

ಬಂದಿಯೊಳಗಿದ್ದವರ ಬಂಧನವ ಬಿಡಿಸುವಾ
ಬಂದಿಕಾರಾ ಶ್ರಾವಣಾ
ಬಂಧನದೊಳಿಹರೊ ಜಗವಂದಿತರನಿಂದಿತರು
ಬಂದೆ ಬಿಡಿಸೈ ಶ್ರಾವಣಾ
ಅಂಧಕಾರವಿದಲ್ಲ ಮಂದೇಹ ಸಂಘವಿದೆ
ಸಂದೇಹವೇ ಶ್ರಾವಣಾ ?
ಅಂದು ಗಾಯತ್ರಿ ಮನದಂದು ಕಿವಿದುಂಬಿಸಿದೆ
ಇಂದಾವುದೋ ಶ್ರಾವಣಾ ?

ಬಂದು ಗೀತೆಯ ಹಾಡಿನೊಂದು ಯೋಗವ ಹೇಳಿ
ಒಂದುಗೂಡೋ ಶ್ರಾವಣಾ.
ಒಂದು ಶ್ರುತಿಯುವ ನೀನಮಂದ ನಂದನವಾಸಿ
ಮಂದಹಾಸಾ ಶ್ರಾವಣಾ.
ನಂದಗೋಪನ ಕಾಂತೆಗಂದೊಪ್ಪಿಸಿದೆ ತಾನೆ
ಬಂಧಮುಕ್ತನ ಶ್ರಾವಣಾ.
ಇಂದು ಬಂದಿಹುದು ಮತ್ತೊಂದು ಸಮಯವು ಅಂತೆ
ತಂದೆ ಬಿಡಿಸೈ ಶ್ರಾವಣಾ.

ಮುಂದಿರುವ ಹೊಲಗಳಲಿ ಇಂದಿರೆಯೆ ನಲಿವಂತೆ
ಚೆಂದವೇನೋ ಶ್ರಾವಣಾ.
ಬಂಧು ನೀ ಬೆಳೆಗೆ ಉಕ್ಕಂದ ನೀ ಹೊಳೆಗೆ ಆ-
ನಂದಸಿಂಧೋ ಶ್ರಾವಣಾ.

ಚಂಡರಾಹುಗ್ರಾಸದಿಂದ ಬಿಡಿಸ್ಯೆ ಜಗದ
ಚಂದಿರನನೇ ಶ್ರಾವಣಾ.
ನಿಂದಿಸುತ ಬಾಯ್ಮುಚ್ಚಿ ಸ್ಪಂದಿಸುತ ಬಡವರಾ-
ಕ್ರಂದಿಸುವರೋ ಶ್ರಾವಣಾ.

ಬಂಧ ಮುಕ್ತಿಯು ದಿನವೆ ಬಂಪೆಯಾ ಬಾ ಬಳಿಗೆ
ಎಂದು ಕರೆಯೋ ಶ್ರಾವಣಾ
ದುಂದು-ಕಂಸನ ಕೊಂದು, ತಂದೆ-ತಾಯ್ ಹೊರತಂದ
ಕಂದನ್ನ ಕರೆ ಶ್ರಾವಣಾ.
ಕೇದಗೆಯು ಹೊಡೆ ತೂರಿ ಊದು ನಿನ್ನ ತುತೂರಿ
ಮೋದ ಬೀರೋ ಶ್ರಾವಣಾ
ನಾದವಿದು ಯಾವುದೊ ಅಗಾಧ ತಳದಿಂ ಬಂತು
ಊದೋದಿದೋ ಶ್ರಾವಣಾ

ಅಷ್ಟಮಿಯು ದಿನ ಮಧ್ಯರಾತ್ರಿ ಜನರಿಗೆ ಜಾತ್ರಿ
ಇಷ್ಟದವನಿಷ್ಟರಲ್ಲಿ
ಹುಟ್ಟಿ ಬರುವನೊ ಚಂದ್ರ ಕುಟ್ಟಿ ಬಂದಂತೆ ತಮ
ದಿಟ್ಟಿ ದಿಟವಾಗುವಲ್ಲಿ.
‘ ಕತ್ತಲೆಯ ತುಟ್ಟತುದಿ ಹತ್ತಿರವೆ ಬೆಳಕುಬದಿ ’
ಎಂದು ಸಾರೋ ಶ್ರಾವಣಾ.
ಮುಂದೆ ಬರುವ ಸ್ವತಂತ್ರ ವಂದಿಮಾಗಧ ನೀನು
ಬಂಧುರಾಂಗಾ ಶ್ರಾವಣಾ

ಕೂಸುಗಳಿಗೆ ಹಾಲು ಇಲ್ಲ, ಪಶುಬಲಿಯೇ ನಡೆದಿದೆ
ಕಾಳು ಇದೆ ಕೊಳು ಇಲ್ಲ, ಹಣದ ಹುಚ್ಚು ಹಿಡಿದಿದೆ.
ಕತ್ತಲಲ್ಲಿ ಬೆಳಕೆ ಇಲ್ಲ, ಜಗಕೆ ಬೆಂಕಿ ಹತ್ತಿದೆ.
ಎಲ್ಲ ಇದೆ ಎಲ್ಲಿ ಇಲ್ಲ, ಇಲ್ಲೆ ಸುತ್ತುಮುತ್ತಿದೆ.
    ಸಾಕು ಎಂಬುವಂತೆ ನೀಡು, ಬೇಕು ಎಂಬ ಹೊತ್ತಿಗೆ
    ಬೆಣ್ಣೆ ಎಣ್ಣೆ ಎರೆಯಬನ್ನಿ ಹಸಿದ ಹೊಟ್ಟೆ-ನೆತ್ತಿಗೆ.

ಬರುವ ಸಾವ ನೆನೆದು ಕೆಲವು ತಿನ್ನುತಿಹವು ಹೆಚ್ಚಿಗೆ
ಕಾಳು ಸಾಲದೀಗ ಜನದ ಇರುವ ಹೊಟ್ಟೆಕಿಚ್ಚಿಗೆ.
ಇದ ಕಂಡೂ ಕಂಡು ಕೂಡ ಏಳಬೇಡ ರೊಚ್ಚಿಗೆ
ಇದರ ಹೊಟ್ಟೆಯಲ್ಲಿ ಹುಟ್ಟಿತೀ ಪಿಶಾಚಿ ಹುಚ್ಚಿಗೆ
    ಬಾಳ್ಮೆಯಲ್ಲಿ ತಾಳ್ಮೆ ಬೇಕು ಬದುಕಬೇಕು ಎಂದರೆ
    ಜೀವವೆ ಸಾವಾಗಬಹುದು ಬಚ್ಚಬರಿಯೊ ನೊಂದರೆ

ಖಣವು ರಣವು, ಜನವು ಹೆಣವು ಸಾವಿಗಾಗಿ ದುಡಿವರೇ?
ಯಾರ ಬಾಳಿಗಾಗಿ ಯಾರೊ ಯಾವೊ ಕೈಗೆ ಮಡಿವರೇ?
ಕಾವ ಕೈಯ್ಯೆ ಕೊಲ್ಲುತಿಹವು! ಮರಣದತ್ತ ನಡೆವರೇ?
ಸಾವಿಗಾಗಿ ತಪಿಸುವವರು ಬಾಳ-ಬೀಜ ಹಿಡಿವರೇ?
    ಕಣ್ಣೀರಿನ ಕಡಲ ನಡುವೆ ತೇಲುತಿಹವು ನೆಲಗಳು
    ತಾಯಿ-ಹಾಲ ಕುದಿಯುತಿಹುದು ಕೆಂಪೇರಲು ಜಲಗಳು.

ಇದ್ದ ನೆಲವ ಹೊಲವ ಮಾಡಿ ಬಿತ್ತಬೇಕು ಕಾಳನು.
ಬದುಕಲಿರುವ ಬಾಯಿಗಳಿಗೆ ತುತ್ತಬೇಕು ಕೂಳನು
ಅನ್ನದಾನ ಮಹಾಯಜ್ಞ ! ಅನ್ನಹೀನ ಆಳನು.
ಅನ್ನ ಮುಚ್ಚಿ ಬಾಳಲೆಳಸುವವನು ಮಹಾಖೂಳನು
ನೆಲದ ಹುರುಡಿನಲ್ಲಿ ಹುರುಳಿಗಿಂತ ಜೊಳ್ಳೆ ಹೆಚ್ಚಿಗೆ
ಗೆದ್ದು ಸತ್ತು ಪಡೆಯುವವರು ಹುಚ್ಚ ಜನರ ಮೆಚ್ಚಿಗೆ.

ಮತ್ತೆ ನೆಲದ ಎದೆಯ ಮೇಲೆ ತೆನೆಯ ಧ್ವಜವು ನಿಲ್ಲಲಿ.
ಸಾವಿಗಿಂತ ಬಾಳು ಮೇಲು ಎಂಬ ಮಾತು ಗೆಲ್ಲಲಿ.
ವಿಷದ ಒಡಲಿನಿಂದೆ ರಸದ ಊಟೆ ಚಿಮ್ಮಿ ಚೆಲ್ಲಲಿ.
ಪ್ರೇಮವೆ ಹಣ್ಣಾಗಿ ಬರಲಿ ಕವಿಯ ಬಲ್ಲ ಸೊಲ್ಲಲಿ.
ಹೊನ್ನ ನೆಕ್ಕಿ ಬಾಳ್ವರಿಲ್ಲ, ಅನ್ನ ಸೂರೆಮಾಡಿರಿ.
ಅಣ್ಣಗಳಿರಾ ಅನ್ನದಲ್ಲಿ ಮಣ್ಣ ಕಲಿಸಬೇಡಿರಿ.

ಇವನಾರೊ ಸಂನ್ಯಾಸಿ, ಅತ್ತೊಬ್ಬ ಬಿಕನಾಸಿ
ಇಲ್ಲೊಬ್ಬ ದರವೇಶಿ ನರಳುತಿಹನು.
ಅಲ್ಲೊ ನಡುಹರೆಯುದವ ಮಾಡಿದ್ದ ಮರೆಯುದವ
ಮಗ್ಗಲಿಗೆ ಆಗೀಗ ಹೊರಳುತಿಹನು.

ಜಳಕ, ಔಷಧ, ಗಂಜಿ ಮೇಲಿನವರಿಗೆ ಅಂಜಿ
ಹೊತ್ತುಹೊತ್ತಿಗೆ ಸುತ್ತು ಸಾಗುತಿಹುದು.
ಹತ್ತು ಮಂತ್ರದ ಬೊಂಬೆಗಳ ಮಧ್ಯದಲ್ಲೊಂದು
ಅರೆಜೀವ ಜೀವನವ ತಾಗುತಿಹುದು.

ವೇಷದ ವಿರಕ್ತಿಯಲಿ ಅನುರಕ್ತಿ ಇಣುಕುತಿದೆ
ಕಣ್ಣೊನೆಗೆ ಕಾರುಣ್ಯ ಓಡುತಿಹುದು
ಅಡಕ-ನಗೆ ಕುಲುಕುಲಿಸಿ ಕಣ್ಣುಮುಚ್ಚಣಿಕೆಯಲಿ
ಮುಟ್ಟಾಟ ಹುಡುಕಾಟವಾಡುತಿಹುದು.

ನೀರ್ಗೆಂಪು ತುಟಿಯಲ್ಲಿ ಸಪ್ಪೆ-ನಗೆ ಹರವುತಿದೆ
ಬತ್ತಿ ತೀರಿದ ಹಣತಿ ಹೊತ್ತಿದಂತೆ
ಬಿಟ್ಟಬೇಸರಿಕೆಯಲಿ ಆರಲಿಹ ಆರತಿಯು
ದೇವರಿಲ್ಲದ ಗುಡಿಗೆ ಎತ್ತಿದಂತೆ.

ಎತ್ತರದ ಹಸಿರು-ಹಣೆ ಹಾಳ ಬಿತ್ತರಿಸುತಿದೆ
ರವಿ ಸಂದ ಪಡುವಲದ ನೆನಪು ತಂದು.
ತುಂಬಿದೆಯ ತುಂಬಿ ಗೊಣಗುಟ್ಟುತಿದೆ ಮರೆಯಲ್ಲಿ
ಒಲ್ಲೆನುತ ಚಲಿಸುತಿದೆ ರಕ್ತಬಿಂದು.

ರೋಗಿಗಳ ಕೋಠಡಿಗೆ ನಡೆನಡೆದು ಆಸರದಿ
ಬೇಸರದ ನಡಿಗೆ ನಡುನಡುಗುತಿಹುದು.
ನಿದ್ದೆಯಲಿ ನಡೆದಂತೆ ಕನವರಿಸಿ ನುಡಿದಂತೆ
ಆರೈಕೆಯಲಿ ಬೇರೆ ಬೆಡಗು ಇಹುದು.

ನಾಡಿಗಳ ಸ್ಪಂದನಕೊ ಯಾವ ಆಕ್ರಂದನಕೊ
ಬೆರಳ ತುದಿ ತುಟಿಯಂತೆ ಅದಿರುತಿಹುದು.
ಹೇಗೊ ಹಾಕಿದ ಹೆರಳು ಕೆದರಿಕೊಂಡಾ ಕುರುಳು
ಎಕ್ಕೆಕ್ಕಿ ಯಾರನೋ ಒದರುತಿಹವು.

ಎಲೆ ಕರುಣೆ ಈ ತರುಣಿ ನಿನಗೆ ಋಣಿಯಾಗಿಹಳು
ನಿನ್ನ ಕಣೆಗಾಗಿ ಕಾದಿಹಳು ಒಳಗೆ
ನಿನ್ನ ಕಿರಣಕೆ ಬಹಳು ಪಲ್ಲವಾಧರೆಯಾಗಿ
ಆ ವರಗೆ ನೋಡುವಳು ಮೇಲೆ ಕೆಳಗೆ.

# ಪ್ರೇಮ . . .

೧. ಅಪೆರೂಪರಾಗೆ

೨. ಒಂದು ಹಾಡು

೩. ವಿರಹಿ-ಚುಂಬಿತ

೪. ದವನ-ಕವನ

೫. ಗಮಾಗಮಾ ಗಮಾಡಸತಾವ ಮಲ್ಲಿಗಿ

೬. ಹಿಂದಽ ನೋಡದ

೭. ತಾಜಮಹಾಲ್

೮. ಶಿವದೃಷ್ಟಿ

೯. ಕೊಡುವುದೇನು-ಕೊಂಬುದೇನು

ಆಹಾ ಚೆಲುವೆ, ಓಹೋ ಚೆಲುವೆ, ಏನು ಚೆಲುವೆಯೋ
ನಿನ್ನ ನೀನೊ ಏನೊ ಏನೊ ನೋಡಿ ನಲಿವೆಯೋ

ರೂಪಕೇಕೊ ಹೆಸರು ದೆಸೆಯೊ ಮೈಯ್ಯೇ ಬೇಕೋ ?
ತನ್ನ ತಾನೆ ಅಲ್ಲೆ ಲೀಸಿ ಇರಲು ಸಾಕೋ
ಗಾನಲೋಲೆ, ನಾಗಲೀಲೆಯಾಗಿ ಒಲಿವೆಯೋ ||
| ತನ್ನ ತಾನೆ

ಬಾನಿನಲ್ಲಿ ಬರೆದ ಗೆರೆಯ ಹಾಗೆ ಮೆರೆವೆಯೋ
ಆ ಅಗಾಧ ಆಳದಲ್ಲಿ ನನ್ನ ಕರೆವೆಯೋ
ಇಲ್ಲೆ ನಾನು ಎಲ್ಲೊ ನೀನು ಕಿವಿಯೊಳುಲಿವೆಯೋ ||
| ಆ ಅಗಾಧ

ಹಾಳಿಪಟವು ಗಾಳಿಯಲ್ಲಿ ತೇಲುವಂತೆಯೋ
ತಿಳಿವೆ ಆದ ಆಸೆಯನ್ನು ಹೋಲುವಂತೆಯೋ
ನೆಲಕೆ ಅಂಟಬೇಡವೆಂದು ಮೆಯ್ಯ ಕೊಲುವೆಯೋ ||
| ತಿಳಿವೆ

ಕೂಡಿರೆ ಕೈಪ್ಯೆ ತಾಲಕೆ ತಾಲ
ಅಲ್ಲಿದೆ ನೃತ್ಯದ ನಿತ್ಯದ ಸೊತ್ತು
ಹೊಂದಿರೆ ಒಂದೆನೆ ಪ್ರಾಸಕೆ ಪ್ರಾಸ
ಅದುವೇ ಕಾವ್ಯವಿಲಾಸದ ಗೊತ್ತು.
ಕೂಡಿಲೆ ಹೊಂದಿರೆ ಚಿತ್ರಕೆ ಚಿತ್ರ
ಪವಣಿಸಿದಂತದು ಮುತ್ತಿಗೆ ಮುತ್ತು.

ವಾಣಿಗೆ ವೀಣೆಯು ಅಚ್ಚಿರಿದಂತೆ
ಇರದಿರೆ ಏನದು ಆ ಹಾಡು.
ದನಿಯಲಿ ನಾದವು ಹುರಿಗೊಂಡಂತೆ
ಇರದಿರೆ ಅದು ಜೀವದ ಪಾಡು.
ಜೀವಕೆ ಜೀವ ನೆರೆ ಬಂದಂತೆ
ಇಂದಿಹುದೇ ನರಕದ ಜೋಡು.

ಏನಾ ಆಸೆ ! ವ್ಯರ್ಥಪಿಪಾಸೆ
ಚಿಗುರೆಯು ಚಂದ್ರಗೆ ಕಣ್ಣಿಟ್ಟಂತೆ
ಹೊನ್ನಿಯು ಚೆಳ್ಳಿಗೆ ಮರುಳಾದಂತೆ
ಆಳವನರಿಯದ ಹುಸಿಯೊಲವು
ಊಳದ ಬಿತ್ತದ ಬರಿ ಹೊಲವು.

ಕಾಮವಿದು ವೈಗಾವು
ಜೀವದ ಬಾವು
ಚಿತ್ತದ ನೋವು
ಎನ್ನರಸಿ,

ಪ್ರೇಮವದಕದೆ ಮದ್ದು
ಉಳಿದುದನೊದ್ದು
ಬಂತೀ ಮುದ್ದು
ನಿನ್ನರಸಿ

ವಿರಹಿ ಬಿಟ್ಟುಸಿರಂತೆ
ಅದಕಾ ಚಿಂತೆ
ಯಾರಿಗೆ ಅಂತೆ
ಇದು ಸಂತೆ,

ತೇಲುವದು ಪರದೇಸಿ
ಇರಲೂ ಹೇಸಿ
ಆ ದರವೇಶಿ
ಇರುವಂತೆ.

ಜನುಮ ಜನುಮದ ದಾಹ
ಎಂದಿಗೆ ಸ್ನೇಹ
ದೊರೆವುದೊ ಆಹ
ಎಂದುರಿದು.

ಇದುವೆ ಇರುಳಿನ ಹಾದಿ
ಬೆಳಕಿನ ಬೂದಿ
ಆದಕೆ ಅನಾದಿ
ಎಂದರಿದು.

ಉಳಿವುದೇ ತಾ ಬಾಳಿ
ಹೇಳೀ ಕೇಳಿ
ಕೊನೆಗೂ ಗಾಳಿ
ಈ ಉಸಿರು.

ಕೊಲ್ಲುವವನೇ ಕಾವ
ತಾಳಿನೆ ನೋವ
ಇಂದಿಗೆ ಜೀವ
ಬರಿ ಹೆಸರು.

ಆಸೆಯುಸಿರನು ಚಾಚಿ
ಹೊರಟ ಪಿಶಾಚಿ
ಗಾಳಿಯು ಬಾಚಿ
ಬರುತಿಹುದೋ.

ನರಕ ತಪ್ಪಿಸಿ ಚಿನ್ನ
ಕಾವುದು ನನ್ನ
ಮುಕ್ತಿಯು ನಿನ್ನ
ಹೊರತಿಹುದೋ?

ನೀನು ಈವೆ ನನಗೆ ದವನ
ನಾನು ಈವೆ ನಿನಗೆ ಕವನ !
ನನ್ನ ಭಾವಕೇನೆ ಎನ್ನು
ಅದುವೆ ಪ್ರೇಮ ಮೋಹವು
ನಿನ್ನ ಭಾವಕೇನು ಎನಲಿ ?
ನನಗೆಯೆ ಸಂದೇಹವು.

" ಶುಷ್ಕವಾದರೇನು ದವನ
ಮೈಗಂಪನು ತರದೆ ಪವನ ? "
ಎನ್ನಬಹುದು ನೀನು ಎತ್ತಿ-
ಕಟ್ಟಿ ನಿನ್ನ ಕಾಣಿಕೆ
ನನ್ನ ಕವನ ತೋರಬಹುದು
ಬರಿಯ ಮಾತ ಪೋಣಿಕೆ.

ಪ್ರೇಮ ಮಾಡೆ ಮೋಹ-ಹವನ
ಕಟ್ಟಿಕೊಂಡಿತೆನ್ನ ಕವನ
ದವನ-ಗಿವನ ಕಂಪು-ಗಿಂಪು
ಎಲ್ಲ ಮರೆತ ಮೇಲೆಯು
ಮೆರೆವುದಿದರ ಭಾವ ಇದಕೆ
ಇಲ್ಲ ಹೊತ್ತು ವೇಳೆಯು.

ನಾನು ನೀನು ಬರಿಯ ನೆವನ
ಕೂಡಿಹವಿದೊ ದವನ ಕವನ
ಒಂದು ಭಾವ ಒಂದು ಹಾವ
ಗೋಪ್ಯ ಹೆಣೆದುಕೊಂಡವು
ಬಾಡದಂತೆ ಬದುಕುವಂಥ
ಬಾಳನೆಲೆಯ ಕಂಡವು.

ನನ್ನ ನಿನ್ನ ಜೀವ ಜವನ
ದವಡೆ ಮೀರಿಯೊಂದು ಭುವನ-
ದಲ್ಲಿ ಒಂದನೊಂದು ಕಂಡು
ಗುರುತು ಹಿಡಿದು ಮುತ್ತವೇ ?
'ದವನಗಂಪೆ' 'ಕವನದಿಂಪೆ'
ಎಂದು ಎದೆಯನೊತ್ತವೇ ?

ಚಿಂತಿಸುತಿಹೆ ಅವನ ಇವನ
ಕಾಣೆ ತೆರೆದ ಹೃದಯಭವನ
ಬಾಡಬೇಡ ದವನದಂತೆ
ಮುಗಿಯಬಹುದು ಬೇಗ ಸಂತೆ
ಕಂಪಿಗೆ ಗರಿ ಮೂಡಿದಂತೆ

ಹಾರಿ ಸಾರಿ ಬಾ
ಸಖಿ ಸಖನಿಗೆ ಕೂಡಿದಂತೆ
ಆರಿ ಏರಿ ಬಾ.

## ೨೯ ಗಮುಗಮಾ ಗಮಾಡಸತಾವ ಮಲ್ಲಿಗಿ

ಗಮುಗಮಾ ಗಮಾಡಸತಾವs ಮಲ್ಲಿಗಿ । ನೀವು ಹೊರಟದ್ದೀಗ ಎಲ್ಲಿಗೆ?
ಗಮುಗಮಾ........

ತುಳುಕ್ಯಾಡತಾವ ತೂಕಡಿಕಿ
ಎವಿ ಅಪ್ಪತಾವ ಕಣ್ಣ ದುಡುಕಿ
ಕನಸು ತೇಲಿ ಬರತಾವ ಹುಡುಕಿ ॥
ನೀವು ಹೊರಟದ್ದೀಗ ಎಲ್ಲಿಗೆ?

ಚಿಕ್ಕಿ ತೋರಸ್ತಾವ ಚಾಚಿ ಬೆರಳ
ಚಂದ್ರಾಮ ಕನ್ನಡೀ ಹೆರಳ
ಮನಸೋತು ಆಯಿತು ಮರುಳ ॥
ನೀವು ಹೊರಟದ್ದೀಗ ಎಲ್ಲಿಗೆ?

ಗಾಳಿ ತಬ್ಬತಾವ ಹೂಗಂಪು
ಚಂದ್ರನ ತೆಕ್ಕಿಗಿದೆ ತಂಪು
ನಿಮು ಕಂಡರ ಕವದಾವ ಜೊಂಪು ॥
ನೀವು ಹೊರಟದ್ದೀಗ ಎಲ್ಲಿಗೆ?

ನೆರಳಲ್ಲಾಡತಾವ ಮರದ ಬುಡಕs
ಕೆರಿ ತೆರಿ ನೂಗತಾವ ದಡsಕ
ಹೀಂಗ ಬಿಟ್ಟು ಇಲ್ಲಿ ನನ್ನ ನಡsಕ
ನೀವು ಹೊರಟದ್ದೀಗ ಎಲ್ಲಿಗೆ?

ನಮ್ಮ ನಿಮ್ಮ ಒಂದತನದಾಗ
ಹಾಡು ಹುಟ್ಟಿ ಒಂದು ಮನದಾಗ
ಬೆಳದಿಂಗಳಾತು ಬನದಾಗ ||
ನೀವು ಹೊರಟದ್ದೀಗ ಎಲ್ಲಿಗೆ?

ನಾವು ಬಂದೆವಲ್ಲಿದಿಲ್ಲಿಗೆ
ಬಾಯಿ ಬಿಟ್ಟವಲ್ಲ ಮಲ್ಲಿಗೆ
ನೀರೊಡೆದಿತಲ್ಲ ಕಲ್ಲಿಗೆ ||
ನೀವು ಹೊರಟದ್ದೀಗ ಎಲ್ಲಿಗೆ?

ಬಂತ್ಯಾಕ ನಿಮಗ ಇಂದ ಮುನಿಸು
ಬೀಳಲಿಲ್ಲ ನಮಗ ಇದರ ಕನಸು
ರಾಯಾ ತಿಳಿಯಲಿಲ್ಲ ನಿಮ್ಮ ಮನಸು ||
ನೀವು ಹೊರಟದ್ದೀಗ ಎಲ್ಲಿಗೆ ?

## ೩೦ . . . ಹಿಂದಽ ನೋಡದಽ

[ ಒಂದು ಹಳೆಯ ಚಿತ್ರವನ್ನು ಕುರಿತು ]

ಹಿಂದಽ ನೋಡದಽ । ಗೆಳತಿ
ಹಿಂದಽ ನೋಡದಽ

ಒಂದೇ ಬಾರಿ ನನ್ನ ನೋಡಿ
ಮಂದ ನಗೀ ಹಾಂಗಽ ಬೀರಿ
ಮುಂದಽ ಮುಂದಽ ಮುಂದಽ ಹೋದ ॥ ಹಿಂದಽ....

ಗಾಳಿ ಹೆಜ್ಜಿ ಹಿಡದ ಸುಗಂಧ
ಅತ್ತಽ ಅತ್ತಽ ಹೋಗುವಂದ
ಹೋತ ಮನಸು ಅವನ ಹಿಂದಽ ॥ ಹಿಂದಽ....

ನಂದ ನನಗ ಎಚ್ಚರಿಲ್ಲ
ಮಂದಿಗೊಡವಿ ಏನಽ ನನಗಽ
ಒಂದೇ ಅಳತಿ ನಡದದ ಚಿತ್ತ ॥ ಹಿಂದಽ....

ಸೂಜಿ ಹಿಂದ ಧಾರಧಾಂಗ
ಕೊಳ್ಳದೊಳಗ ಜಾರಿಧಾಂಗ
ಹೋತಽ ಹಿಂದ ಬಾರಧಾಂಗ ॥ ಹಿಂದಽ....

ಭರತಖಂಡನಾಳಿದಂಥ ಭೂಪತಿಯೊಬ್ಬ
ಮರ್ತ್ಯದೇಹವನೊಂದು ಮೆಚ್ಚಿ, ಜೀವಿತಸಾರ-
ವಾದ ಪ್ರೇಮವನದಕೆಯಿತ್ತು, ಅಪರಂಪಾರ
ವೈಭವದ ಮಂದಿರವನದಕೆ ಕಟ್ಟಲು, ಕಬ್ಬ-
ಬಿಲ್ಲ ಮಾಡಿದ ಕುಸುಮಶರನು ಸೋಲುತ, ' ಅಬ್ಬ !
ಕಲ್ಲಲುಂಟೇ ನಲ್ಲೆಗೊಲಿದು ನಲಿವ ಪ್ರಕಾರ ! '
ಎಂದ; ಅಂದಿಂದಿಗೂ ಪ್ರೇಮಯಾತ್ರೆಗೆ ಯಾರ
ಎದೆಯು ಒಲೆದಿದೆ ಅವಗೆ ಇದನು ಕಂಡರೆ ಹಬ್ಬ.

ಬೆಲೆ ಕಟ್ಟಬರದ ಈ ಪ್ರೇಮ-ಸ್ಮಾರಕ ಕೊನೆಗೆ
ಕಾಲಲೀಲೆಗೆ ಈಡೆ ? ಎದುರಿಸುವರೇ ಜವನ ?
ಮಣ್ಣುಪ್ರಕೃತಿಗೆ ಸದಾ ಮಣ್ಣು ಆಟವೆ ಸಾಜ
ಅಂದು ಕಥೆಯಾದೀತು ಇಂದಿನದ್ಭುತ ತಾಜ;
ಬಿಟ್ಟಾವು ಈ ಕಥಾಕಲ್ಪವೃಕ್ಷದ ಗೊನೆಗೆ
ಪ್ರೇಮಸ್ಮಾರಕಕೆ ಸಾವಿರದ ಸಾವಿರ ಕವನ.

ಅವನ ನೋಟ ಅವಳ ಕೂಟ ಏನೊ ಆಟವಾಡಿತು
ಏನೇನೋ ಮಾಡಿತು.

ಕೂದಲನ್ನು ಹಣಿಗೆಯಂತೆ ಹಿಕ್ಕಿ ಹಿಕ್ಕಿ ಬಾಚಿತು।
ಕುರುಳಿಗೆ ಕುಡಿ ಚಾಚಿತು ॥

ಹಣೆಯ ಓರೆ ತಿಂಗಳಲ್ಲಿ ಉಬ್ಬಿ ಉಬ್ಬಿ ಹಬ್ಬಿತು।
ಮತ್ತೆ ಮುತ್ತಿ ತಬ್ಬಿತು ॥

ಕಣ್ಣ ಚಿಕ್ಕೆಗಳಲಿ ಕೆಳೆಯನೆಳಸಿ ಬಳಸಿ ಸಂದಿತು।
ಒಂದುಗೂಡಿ ನಿಂದಿತು ॥

ಕೆನ್ನೆಗಳಿಗೆ ಕಿರಣ ಹರಡಿ ಮೆಲ್ಲನೆ ತುಟಿ ಮುಟ್ಟಿತು।
ಮೆಲುನಗೆಯೊಲು ತಟ್ಟಿತು ॥

ಕೊರಳಿನಲ್ಲಿ ಜೋತು ಹೆಗಲಿನಲ್ಲಿ ಸೋತು ಬಿದ್ದಿತು।
ಬಾಹುಲತೆಯ ತಿದ್ದಿತು ॥

ಕೈಕೈಯಸು ಹಿಸುಕುವಂತೆ ಬೆರಳಿನೊಡನೆ ಆಡಿತು।
ತಂಪು ಮೆಲುಪು ನೋಡಿತು ॥

ಎದೆಯ ಆಳದಲ್ಲಿ ಮುಳುಗಿ ಆದರ ಹರುಹ ಬೆಳಗಿತು।
ಆದರೆತ್ತರ-ಕುಳಿದಿತು ॥

ಪಕ್ಕೆಗಳಿಗೆ ತೆಕ್ಕೆ ಬಿದ್ದು ಕಂಕುಳನ್ನು ಸೋಂಕಿತು ।
ಬೆನ್ನ ತಟ್ಟಿ ನೂಂಕಿತು ॥
ನಡುವಿಗೆ ನಡುಪಟ್ಟಿಯಾಗಿ ತೊಡೆಗಳಲ್ಲಿ ತಂಗಿತು ।
ಧ್ಯಾನದಲ್ಲಿ ಇಂಗಿತು ॥
ಅಡಿಯಿಂದಲೂ ಮುಡಿಯ ವರೆಗು ಅಳಿದು ಬೆಳೆದು ಹೊಳೆದಿತು।
ಮೈಯ್ಯನೆಲ್ಲ ತೊಳೆದಿತು ॥
ಅಂತರಂಗದಲಿ ತರತ್ತರಂಗವಾಗಿ ಮೂಡಿತು ।
ಅಂತರಾತ್ಮಗೂಡಿತು ॥

## ೩೩ ಕೊಡುವುದೇನೂ? ಕೊಂಬೂದೇನು?

ಕೊಡುವದೇನು ? ಕೊಂಬುದೇನು ?
ಒಲವು, ಸ್ನೇಹ, ಪ್ರೇಮ,
ಹೊರಗೆ ಬರಿದು, ಒಳಗೆ ಬಲಿದು
ಇದ್ದವರಿಗೆ ನೇಮ.

ರವಿಯು ಶಶಿಯು ತಂಪು ಬೆಳಕು
ಛಂದದ ಋತುಮಾನ
ಒಲಿಸಿ ಒಲಿವ ನಲಿಸಿ ನಲಿವ
ಜೀವ ದಿವ್ಯಗಾನ

ಹೃದಯ ಹೀನ! ಜೀವ ದೀನ!
ದೇವ ಬಡವನೇನೋ ?
ನೆಲವು ನೀರು ಗಾಳಿ ಬೆಳಕು
ಬಾನು ತುಂಬ ಜೇನು.

ಕಷ್ಟದಲ್ಲು ಅವನ ಕರುಣೆ
ಮಾಲೆಮಾಲೆಯಾಗಿ
ನಮ್ಮ ಕಟ್ಟಿ ಎಳೆವುದಣ್ಣ
ಮುಕ್ತಿಶಾಲೆಗಾಗಿ

ಅಮೃತದೊರತೆಗೇನು ಕೊರತೆ ?
ಅವನ ಹೊರತೆ ಬಾಳು
ಎದೆಯ ಒಲುಮೆ ಆವನ ಕುಲುಮೆ
ಬೇರೆ ಒಲುಮೆ ಹಾಳು.

ಕೊಟ್ಟು ಕೊಂಡು ಬೆಳೆವುದೆಲ್ಲು
ಪ್ರೇಮಕಲ್ಪವಲ್ಲಿ
ಹೂವೊಳಿಲ್ಲಿ ಚಿಕ್ಕೆಯಲ್ಲಿ
ಜೀವ ಜಾತದಲ್ಲಿ.

ಕಾಯದುಸಿರ ಕಳೆಮ ನೋಡು
ಜೀವದುಸಿರನೆಳೆದು ನೋಡು
ಅವನ ಒಲವ ನಂಬಿ
ನಲಿವು ಬಲವು ಹಲವು ಚೆಲವು
ಜಗದ ಮೂಲವೆಂಬಿ
ಜೀವನಯನ ತೆರೆಯೆ ಕಾಂಬಿ
ಒಲವಿನಲ್ಲೆ ತುಂಬಿ.

## ತತ್ವ:ಸೃಷ್ಟಿ . . .

# ಹಂಸದ ಹಾಡು

ಕೇಳಿಲಿ ಕೇಳದಿ ಹಂಸದ ಹಾಡು
ಈ ಹಾಡಿಗೆ ಬೇರಾವುದು ಈಡು || ಪಲ್ಲ ||

ಹಂ ಹಂ ಎನ್ನುತ ಹೊರಟಿತು ಉಸಿರು
ಸಃ ಸಃ ಎನ್ನುತ ಹೊಕ್ಕಿತು ಉಸಿರು
ಹಂ ಸೋ ಹಂ ಸಃ ಎನುತಿದೆ ಉಸಿರು

ಮಲಗಲಿ ಏಳಲಿ ಹಂ ಸೋ ಹಂ ಸಃ
ಕೂಡಲಿ ಮಾಡಲಿ ಹಂ ಸೋ ಹಂ ಸಃ
ಹಗಲೂ ಇರುಳೂ ಹಂ ಸೋ ಹಂ ಸಃ

ಉಸಿರಲಿ ಹಾರುವ ಜೀವದ ಹಂಸ
ಶ್ವಾಸೋಚ್ಛ್ವಾಸದ ರೆಕ್ಕೆಯ ಹಂಸ
ಒಳಗೂ ಹೊರಗೂ ಒಂದೇ ಹಂಸ.

ಹಂ ಎನೆ ನಾನು ಸಃ ಎನೆ ತಾನು
ಇದನೆ ಎನ್ನುವೆವು ನಾನೂ ನೀನೂ
ಬೆಸುಗೆ ಹಾಕಿತದು ಆಕೆಯು ಅವನು.

ಪ್ರಾಣವ ಕುಡಿವುದು ಜೀವದ ಜ್ಯೋತಿ
ಹಾಲ ಕುಡಿಯುವೊಲು ಹಂಸದ ಜಾತಿ
ನೀರನು ಬಿಡುವುದು ಅದರಾ ರೀತಿ.

ಪ್ರಾಣದೊಳಿರುವದು ಹಾಲೂ ನೀರು
ನೀರನು ಬೆರಸದ ಹಾಲನು ಹೀರು
ಬೆಂಕಿಯ ಕಂದಾ ಹದವನು ತೋರು.

ಹಂಸೋ ಹಂಸಾ ಎನುತಿದೆ ಉಸಿರು
ಹಂಸಾ ಎನುತಿದೆ ಗಾಳಿಯು ಬಸಿರು.
ಬಯಲ ತುಂಬಿ ಈ ಹೆಸರೇ ಹೆಸರು.

ಹಂಸವು ಕೇಳಿತು: ಎಲ್ಲಿಹೆ ಬ್ರಹ್ಮಾ ?
ಬ್ರಹ್ಮವು ಹೇಳಿತು: ಇಲ್ಲಿಹೆ ತಮ್ಮಾ,
ಬಿಡುಗಡೆ ಇಲ್ಲವು ನಮ್ಮಾ ನಿಮ್ಮಾ.

ತಿಳಿದು ಬದುಕಿದರೆ ಬಾಳೇ ಒಂದು
ತಿಳಿಯದ ನೀರಲಿ ಕಂಡೀತೆಂದು ?
ಹಮ್ಮಿನ ಹುರುಳಿನ ಆತನ ಹೊಂದು

ಈ ಹಾಡನೆ ಇಡಿ ಜಗ ಹಾಡುವದು.
ಜೀವಕೋಟಿಯೂ ಇದಕಾಡುವದು
ಇದರರಿವಿರದೆಲ್ಲಾ ಬಾಡುವದು.

ಬದುಕು ಮಾಯೆಯ ಮಾಟ
ಮಾತು ನೊರೆ-ತೆರೆಯಾಟ
ಜೀವಮಾನದ ತುಂಬ ಗುಂಭ ಮುನ್ನೀರು
ಕರುಣೋದಯದ ಕೂಡ
ಅರುಣೋದಯವು ಇರಲು
ಎದೆಯ ತುಂಬುತ್ತಲಿದೆ ಹೊಚ್ಚ ಹೊನ್ನೀರು.

ನಿಜದಲ್ಲೆ ಒಲವಿರಲಿ
ಚೆಲುವಿನಲೆ ನಲಿವಿರಲಿ
ಒಳಿತಿನಲೆ ಬಲವಿರಲಿ ಜೀವಕೆಳೆಯಾ
ದೇವ ಜೀವನ ಕೇಂದ್ರ
ಒಬ್ಬೊಬ್ಬನೂ ಇಂದ್ರ
ಏನಿದ್ದರೂ ಎಲ್ಲ ಇಲ್ಲೆ ತಿಳಿಯಾ.

ಆತನಾಕೆಯೆ ನಮ್ಮ
ಜೀವನೌಕೆಯ ತಮ್ಮ
ಧ್ರುವ ಮರೆಯದಂತೆ ನಡೆಸುತ್ತಲಿರಲಿ.
ಈ ನಾನು ಆ ನೀನು
ಒಂದೆ ತಾನಿನ ತಾನು
ತಾಳಲಯ ರಾಗಗಳು ಸಹಜ ಬರಲಿ.

ಏನು ? ಯಾಕೆ ? ಎಲ್ಲಿ ? ಯಾರು ?
ಎಂದು ತೊದಲನಾಡಿದೆ.
ಅಂದಿನಿಂದ ಇಂದುವರೆಗು
ಅದೇ ಹಾಡ ಹಾಡಿದೆ.
ಹತ್ತು ದೇಶ ನೋಡಿದೆ,
ನೂರು ಶಾಸ್ತ್ರ ಓದಿದೆ
ಮೊದಲು ತೊದಲು ಮಾತಿನಲ್ಲೆ
ಇನ್ನೂ ಇದೆ ಅರಿವಿನೆಲ್ಲೆ
ಏನು ? ಯಾಕೆ ? ಎಲ್ಲಿ ? ಯಾರು ?
ಇನ್ನೂನು ಕೇಳುವೆ
ಎದೆಯಲವಿತು ಕುಳಿತ ಗುರುವೆ !
ಹೇಳು ಏನ ಹೇಳುವೆ ?

ಕತ್ತಲುಗಳ ದಾಟಿ ದಾಟಿ
ಬೆಳಕು ಬೆಳಕು ಎಂದೆನು
ಸಾವು ಸಾಸಿರಗಳ ಸಾರಿ
ಅಮೃತ ಎನುತ ಬಂದೆನು.
ಸಟೆಯ ತೆರೆಯು ತೆರೆಯುತ
ದಿಟವು ಮೋರೆವರೆಯುತ
ಬಂದರೇನು ಎಂದಿನಂತೆ

ಮುಂದೆಯು ಹಿಂದಿದ್ದ ಚಿಂತೆ
ಇದು ಅದೃಷ್ಟ ಇದು ಅಗಮ್ಯ
ಎನುತ ಎನುತ ಸಾಗಿದೆ
ನಿನ್ನ ಪಾದದೆಡೆಗೆ ತಲೆಯು
ಅಡಿಗಡಿಗೂ ಬಾಗಿದೆ.

ಎಲ್ಲಿ ಏನು ರಮ್ಯವಾಗಿ
ಕಂಡರೆ ಮರುಳಾಗಿದೆ.
ಅಪರತನದ ಅಗಮ್ಯತೆಗೆ
ಸೋತು ತಲೆಯು ತೂಗಿದೆ.
ಕಾಣುತಲಿದೆ ಭವ್ಯವು
ನೋಡುತಲಿದೆ ದಿವ್ಯವು.
ಒಂದನೊಂದು ಅರಸಿ ಮರೆಸಿ
ಆಗ ಈಗ ಬಿಡಿಸಿ ಬೆರಸಿ
ಜೀವವು ಸಂಭ್ರಮದೊಳೆಂದು
ನಿನ್ನನ್ನೇ ಕರೆದಿದೆ.
ಇಗೋ ಸೃಷ್ಟಿಪುಟದೊಳೆಲ್ಲು
ನಿನ್ನ ಹೆಸರೆ ಬರೆದಿದೆ.

ಮಾನವ ಚಾರಿತ್ರ್ಯದಲ್ಲಿ
ಎಷ್ಟೊ ಪ್ರಳಯವಾಗಿವೆ.
ಸ್ತ್ರೀಯ ಪ್ರೇಮ ಪುರುಷ ಭಾಗ್ಯ
ಕಾದು ಕಾದು ಮಾಗಿವೆ.

ನಾಗರಿಕತೆ ಮುಳುಗಿವೆ.
ಸಂಸ್ಕೃತಿಗಳು ಬೆಳಗಿವೆ
ಅಧಃಪತನವಾಗುತಿರಲು
ಅವತಾರವು ತೇಗುತಿರಲು
ಉದ್ಧಾರದ ಆಸೆಯಾಗಿ
ಮೂಲಜಲಕೆ ಮರಳಿವೆ
ಅಂತರಂಗದತ್ತ ನಯನ
ತಾನಾಗಿಯೆ ಹೊರಳಿವೆ.

ಹೃದಯ ಹೂಡಿ ಹತ್ತು ಆಟ
ಇಳಿಸಿ ಪ್ರೇಮಪಾಕಕೆ
ಊಟೆಯಾಗಿ ಎತ್ತಲಿಹುದು
ನರರ ನರಕ ನಾಕಕೆ.
ವಿಧಿವಿಲಾಸ ನಡೆದಿದೆ
ಹಳೆಯ ಹಾದಿ ಹಿಡಿದಿದೆ.
ಪ್ರಕೃತಿ ತನ್ನ ಹಾಸ ಹಾಸಿ
ಮಾಯೆ ತನ್ನ ಬಲೆಯ ಬೀಸಿ
ಬಯಲಿನಲ್ಲಿ ಗಾಳಿಯಾಡಿ-
ದಂತೆ ನಮ್ಮ ಆಡಿಸಿ
ಕ್ರೀಡಿಸುವದು, ಬಾ ಕರುಣಿಸಿ
ಬೇರೆ ಆಟ ಮಾಡಿಸಿ.

ನಿನಗೆ ಲೀಲೆ ಸೇರುವಾಗ
ನನಗೆ ಏಕೆ ಬೇಸರ?
ಕಟ್ಟಿ ಮುರಿದು ಕೆಡಿಸು ಬೆಳಿಸು
ನೀನೆ ನನಗೆ ಆಸರ.
ಸಾಗಲಿಂತು ಚಕ್ರವು
ನಿನ್ನ ರೀತಿ ವಕ್ರವು
ನೀನು ಬಾ ಅನಂತನಾಗಿ
ಜೀವ ಇರಲಿ ಅಮೃತವಾಗಿ
ತಾಪ, ಪಾಪ, ನೋವು, ದುಃಖ,
ಚಿಂತೆ ಭೋಗದಾಟವು.
ನಟನ ಹಾಗೆ ಎನಿಸಲೆನಗೆ
ನಿನ್ನ ಕಲೆಯ ಮಾಟವು.

ಏನು ಆಟ ಏನು ಮಾಟ
ಕುತೂಹಲಕೆ ಆಡುವೆ
ಪ್ರಪಂಚವನು ಚಿತ್ರಿಸುತ್ತ
ನೀನೊ ಕಥೆಯ ಮಾಡುವೆ
ತಿಳಿಯದೆಂದಃ ತಿಳಿದಿತು
ಇಷ್ಟು ನನಗೆ ಹೊಳೆದಿತು.
ಅಷ್ಟರಲ್ಲೆ ತೃಪ್ತಿ ನನಗೆ
ದಿನವು ಇದೊ ವಿನೋದ ನಿನಗೆ.

ಆದರೇನು ಮತ್ತೆ ನಾನು
ಏನು ? ಏಕೆ ? ಕೇಳುವೆ
ಹಳೆಯದನ್ನೆ ಹೊಸೆಯಿಸಿ ನೀ
ರಸ ಹುಟ್ಟಿಸಿ ಹೇಳುವೆ.

ಊರ ತುದಿಯ ಆ ಮೂರು ಬಟ್ಟೆ ಮುಗಿದಲ್ಲಿ ಕೊಳ್ಳವೆಲ್ಲಿ
ಹಳ್ಳ ಅಡಗಿ ಹರಿದಲ್ಲಿ, ತುಡುಗು-ದನ ತೊಂಡು ಮೇಯುವಲ್ಲಿ
ದಿಕ್ಕು ತಪ್ಪತಾರ ತಪ್ಪಿ ಹೊಕ್ಕರಽ ಕಕ್ಕಾವಿಕ್ಕಿಯಾಗಿ
ಇರುಳು ಅಂತನಽ ಹಗಲಽ ಗೂಕತಾವ ಅಲ್ಲಿ ಜೋಡಗೂಗಿ.

ಆದನ ದಾಟಿ ಆ ಪುಸಣವಾಟಿ, ಎಡಕಾಗಿ ಅದರ ಆಚಿ
ಕಾವು ತನ್ನ ಹಚ್ಚಂಗಿ ಹಾಸಿಧಾಂಗೆಲ್ಲಿ ನೀರ ಪಾಚಿ
ಹೊಚ್ಚಿ ಹೊಂಡವನು ಮೆಚ್ಚ ಮಾಡತಾವೊ ಕಂಡ ಕಣ್ಣುಗಳಿಗೆ.
ಪಾಚಿ ಸರಿಸಿದಾಗ ಕಪ್ಪು ನೀರು ಕರಿತಾವ ಒಳಗ ಬಳಿಗೆ.

ಅದರ ಮುಂದ ಗವಿಗುಡ್ಡ ಅಡ್ಡ ಬರತಽದ ನಮ್ಮ ಬಲಕ
ಅತ್ತಿತ್ತ ಹರುಹಿ ಹತ್ತ್ಯೊತ್ತಿ ಬಂದ ಕಾಳಮ್ಮಗಿರುವ ಹೊಲಕ
ಆ ಹೊಲದ ನಟ್ಟನಡುವಿರುವ ಹುಣಿಸಿಮರ ಏರಿ ನೋಡಿದಾಗ
ಹತ್ತ ಗಿಡದ ಗುಂಪೊಂದು ಕಾಣತದ ಸಣ್ಣ ಏರಿವ್ಯಾಗ.

ಅಲ್ಲಿ ತೊಗಲಬಾವಲೀ ಚೀರತಾವ ಭರತಿ ಹಗಲಿನೊಳಗ
ಹಿಂಡು ಪರಿವಾಳ ಹೊಕ್ಕ ಹೊರಡತಾವ ಮತ್ತ ಒಳಗ ಹೊರಗ.
ಅಲ್ಲಿ ಹಬ್ಬಿ ಹರುಹ್ಯಽದ ಬೇವಿಗೇ ಸುತ್ತ ಅಮೃತಬಳ್ಳಿ
ಹಾಲ ಸುರವತಾವ ಆಲ ಅಲ್ಲಿ ಅಲ್ಲಾಡತಾವ ಅಳ್ಳಿ.

ಅತ್ತಿಗಿಡಕ ಹತ್ಯಾವ ಹಲಸಿನ್ಹಂಗ ಬುಡಕು ಕೆಂಪು ಹಣ್ಣು
ಜೇನು ತುಂಬಿ ತೋಟಗುಟ್ಟತಾವ ಅದ ಬಯಸತಾವ ಕಣ್ಣು.
ಈ ತೋಪಿನ್ಯಾಗ ಬೆಳದಽದ ಹ್ಯಾಂಗೋ ಮೂಲ್ಯಾಗ ತಪ್ಪಿ ಮಾವು.
ಅದರಡಿಗೆ ಹುತ್ತ ಆದರಾಗ ಐತೆ ಒಂದೇಳ ಹೆಡೆಯ ಹಾವು.

ಆ ಮಾವಿನೊಳಗ ಈ ಸುಗ್ಗಿಯೊಳಗ ಬಂದsದ ಕೋಗಿಲೊಂದು
ತನ್ನ ಜೋಡಿ ಕರೆದ್ಹಾಂಗ ಕರಿತsದ ನನ್ನ ಬಾರs ಅಂದು
ಕೂಗೇ ಕೂಗತsದ ಕ್ಹೂಗೇ ಗ್ಹೂಗತsದ ಗಿರಣಿ ಕರೆಯೊ ಹಾಂಗ
ತೆರಪು ಇಲ್ಲ ಒಂದಳತಿ ಕೂಗತsದ ಬ್ಯಾಸರಿಲ್ಲಧಾಂಗ.

ತಿಳಿಯದ್ಯಾವದೋ ಕಂಪು ಎಳೀತsದ ತುಂಬಿ ಹುಚ್ಚು ಆಗಿ
ಎಚ್ಚರಿಲ್ಲದs ಎತ್ತೊ ತಿರಗತಾವ ದಿಕ್ಕು ತೋರದಾಗಿ.
ಬಂತು ಸುಗ್ಗಿ ಬಂದsವ ಸುಗ್ಗಿ ಬರತsದ ಸುಗ್ಗಿ ಎಂದು
ಕುಹೂ ಅನ್ನತದ ಕುಹೂ ಅನ್ನತದ ಕುಹೂಕ್ಕುಹೂ ಅಂದು.

ತಾರ ಪಂಚಮದಾಗ ಕೋಗಿಲಾ ಕೂಗತsದೊ ಜೋಗಿ
ಯಾವ ಬಣ್ಣ ಅದಕಾವ ಕಣ್ಣು ನಾ ನೋಡಲೇನು ಹೋಗಿ
ತೋಟವೆಲ್ಲ ಹೂವಾಗಿ ನಿಂತು ತೊಂಗೆಲ್ಲ ಗೊಂಚಲಾಗಿ
ಪಾಡು ಆಗತಾವ, ಹಣ್ಣು ಆಗತಾವ ಅದರ ಲಯಕೆ ತೂಗಿ.

ಮುಂಜಾವತೊಟ್ಟು ಇರು ಹಂಗು ಬಿಟ್ಟು ಬರಿ ಹಾಂಗ ಕೂಗತsದೋ
ತಲಿ ಕಾವಿನೊಳಗ ಇಮ್ಮಾವಿನೊಳಗ ಬಿಸಿಗಾಲ ನೂಗತsದೋ!
ಕೊಳಲ ನುಡಿಸಿಧಾಂಗ ಕುಹೂಹುಹೂಹೂ ಉಲಿತsದೊ ಜೋಗಿ
ಬೇರೆ ಕೆಲಸದಾಗ ಮನಸು ತೊಡಗದೋ ನೋಡಲೇನು ಹೋಗಿ ?

ಬಂದೆ ಜೋಗಿ ಬಾ, ಬಾರೊ ಜೋಗಿ ಬಾ, ಏನು ಹೊತ್ತು ಬಂದಿ
ನೀನೆ ಹೇಳಿದಾ ನಾಮ ಜಪಿಸುವಾಗ ಬಂತೋ ಸುಗ್ಗಿ ಸಂಧಿ.
ತಲೆಯ ಯಾವದೋ ನಾಡಿಯೊಳಗ ಸುರುವಾತು ಸುಗ್ಗಿ ಸೊಲ್ಲು
ಮುಂದೆ ಕೇಳಿದರ ಅದs ತುಂಬಿತೋ ಮೂಲೆ ಮೂಲೆಯಲ್ಲು.

ಗುಡಿಗೆ ನಾನು ಹೊರಟಾಗ ಕರೀತಽದ ಕುಹೂಕ್ಕುಹೂ ಎಂದು
ಮನದ ಜಪದ ನಡುನಡುವೆ ನಡೀಽತಽದ ಓಂ ಕುಹೂ ಎಂದು.
ಕನಸಿನೊಳಗ ನಾ ಸ್ವರಾ ಕೇಳಿ ಮಾಮರಾ ಆಗತೇನೋ
ಅಂತ ಭ್ರಮಾ ಆಗ್ಯಽದ ಮನಕ ನೀ ಬಂದೆ ಜೋಗಿ ಏನೋ !

ಯಾವ ಸ್ವರಾ ಇದು ಯಾವ ಕೋಗಿಲಾ ಯಾವ ಮರವೊ ಏನೋ
ಯಾಕ ಹೀಂಗ ಅಸರಂತ ಕೂಗತದ ಏನು ಇದಕೆ ಬ್ಯಾನ್ಯೊ
ಸುತ್ತು ಗುಡ್ಡ ನುಗ್ಗಾಗಿ ಹೋದವೋ ಓಗೊಟ್ಟು ಇದಕಽ
ಬಿಸಿಲು ಕುಣಿದು ಬೆವತಽದ ಈಗ ಬಂದಽದ ಮಳಿಯು ಹದಕಽ

ಆ, ಹಾ, ಹಾ, ಮಲ್ಲಿಗೆ
ಬರುವೆನೆ ನಿನ್ನಲ್ಲಿಗೆ.
" ಚುಕ್ಕಿ ಹೊಳಪು ಬೆಳಗಿದಾಗ
ಬೆಳಗು ಬೆಳ್ಳಿ ತೊಳಗಿದಾಗ
ತಿಂಗಳಿನ್ನೂ ಮುಳುಗದಾಗ
ಬರುವೆನೆ ನಿನ್ನಲ್ಲಿಗೆ
ಹೇ ಸುಗಂಧ-ಗಂಧ-ಮೋಹನೇ
ಏ ಮಂದಪವನವಾಹನೇ
ಹಾ ತಲುಪಿದೆ ಆವಾಹನೇ
ಆ, ಹಾ, ಹಾ, ಮಲ್ಲಿಗೆ "

ನಸುಕು ಸುಸಿಲ ಸಮಯವಾಗೆ
ಸೌಸವವದು ಸೂಸಿ ತಾಗೆ
ಕಾಣದೆ ಅದು ಬರುವ ಹಾಗೆ
ಬರುವೆನೆ ನಿನ್ನಲ್ಲಿಗೆ
ಹೇ ಚೂತಾಂಕುರ ಚಾಮರೇ
ಏ ನಿನ್ನಿದಿರೇ ತಾಮರೇ
ಹಾ ಬೇರೆ ಸೋಮ-ಕಾಮರೇ
ಆ, ಹಾ, ಹಾ, ಮಲ್ಲಿಗೆ.

ಸವಿಗನಸಿನ ಕಾಲದಲ್ಲಿ
ಉಷೆ ಕುಣಿಯುವ ತಾಲದಲ್ಲಿ
ನಿನ್ನ ಮೋಹಜಾಲದಲ್ಲಿ
ಬರುವೆನೆ ನಿನ್ನಲ್ಲಿಗೆ.

ಹೇ ಕೋಕಿಲ-ನುತಿ-ಗಾಯನೇ
ಏ ಬಾನ ಬಾಯಿ 'ಆ' ಎನೇ
ಹಾ ಗಾಳಿಗೊಳಲು 'ಹೋ' ಎನೇ"
ಆ, ಹಾ, ಹಾ, ಮಲ್ಲಿಗೆ.

* * * *

'ಮೂಗಾಳಿಯ ಮೂಗುದಾರ
ಎಳೆವುದು ಹೇ ಮಧುಪ ಬಾರ
ಮಧುಚುಂಬನ ಬೇಗ ತಾರ'

ಹಾಡುವುದೀ ಗಾಳೀ
ಒಲವಿನ ಹೊಸ ಕಾಳೀ
ಕವಿಯ ರೂಪ ತಾಳಿ
ಆ, ಹಾ, ಹಾ, ಮಲ್ಲಿಗೆ.

# ಹೂವೆ

ಇದ್ದಲ್ಲಿ ಇರು ಹೂವೆ
ಗಾಳಿಹೊಳೆಯೊಳು ನಾವೆ
ತೂಗಾಡುತಿರುವಂತೆ ತೂಗುತ್ತಿರು.

ಸವಿಯ ಚೆಲುವಿನ ಜೇನು
ಹೂ ಕೇಳಬೇಕೇನು ?
ನೋಟ ಕೂಟವು ಸಾಕು ಮಾಗುತ್ತಿರು.

ಎಲರಲೆಯ ಪರಿಮಳಿಸಿ
ನಾತ-ಗೀತವನಳಿಸಿ
ಮೈಮನದಿ ನಂದನವನರಳಿಸುತಿರು.

ಮೈಯ ಬಾನೊಳಗೆತ್ತು
ಅಲ್ಲಿ ಬೆಳಕನು ಬಿತ್ತು
ಮಣ್ಣನ್ನು ಕಂಪತ್ತ ಹೊರಳಿಸುತಿರು.

## ನಸುಕು ಬಂತು ನಸುಕು . . . ೪೦

ಬೆಳಗು ಗಾಳಿ ತಾಕಿ ಚಳಿತು
ಇರುಳ ಮರವು ಒಡೆದು ತಳಿತು
ಅರುಣ ಗಂಧ ಹರುಹಿ ಒಳಿತು
ನಸುಕು ಬಂತು.

ಬೆಳಕು ಬಳ್ಳಿ ಬಿಟ್ಟು ಕುಡಿ
ಬಯಲಲೆತ್ತಿ ಹಗಲಗುಡಿ
ಅಡಗಿಸಿಟ್ಟು ರವಿಯ ಮಿಡಿ
ನಸುಕು ಬಂತು.

ಬೆಳಗು ಸೂಸುತಿರಲು ಸುಸಿಲು
ಆದನು ಮೂಸುತಿರಲು ಉಸಿಲು
ಬೆಳಕು ಹೂತು ಆತು ಬಿಸಿಲು
ನಸುಕು ಬಂತು.

# . . . ಮೌನ

ಸದ್ದಿಲ್ಲ ಸುಳಿವಿಲ್ಲ; ರವಿರಾಜ ಮೂಡುವನು
ಬೆಳಗುವನು ಅಡಗುವನು ಬೇಸರೆಲ್ಲವ ದೂಡಿ
ಮೌನ ಮೊರೆಯಿಡುವಂತೆ ಕಡಲು ತೆರೆತೆರೆದಾಡಿ
ಮರ್ಯಾದೆ ಮೀರದಿದೆ. ಅಗೊ ಅಲ್ಲಿ ಮೋಡವನು
ಎಲ್ಲೊ ಸುಮ್ಮನೆ ಸುರಿದು ಇಹುದು ಬಿಲ್ಲನು ಕೂಡಿ,
ನಿಶೆಯ ಕೌಮುದಿ; ಬಾನಬಯಲಗಡಲಿನ ನೌಕೆ
ಆರು ಕಾಲಕು ತೇಲಿ; ಮಲೆಯ ಜಡೆಯಲಿ ಮೂಡಿ
-ಸೂಸಿ ಸೌಸವ; ಇರವೆ? ಮಾತು ಬೇಕೇ ಏಕೆ?
ಹುಸಿನಗೆಯು, ಕುಡಿನೋಟ, ಹಿಗ್ಗುಹಿಗ್ಗಿನ ಕೇಕೆ
ಮರುಳಾಟ, ಅಳುವು ಹಸಿವಿನ ಕೂಗು, ದನಿಮೋಡಿ
ಒಂದೆ ಬಸಿರಿನ ಬದುಕು ಒಂದೆ ಹೃದಯವ ನೀಡಿ
ತಣಿಯುವೇ? ಶ್ರುತಿಯಾಗು-ನಾದಮಾತೃಕೆ ಆಕೆ
ಕೂಸು ಮಾತಿಗೆ ಮೌನ ತಾಯಿ ಮಡಿಲು ಸದೈವ;
ಮಾತು ಮೌನದ ಪ್ರತಿಮೆ, ಮೌನ ಮಾತಿನ ದೈವ.

# ಅನುಭಾವ ಗೀತಗಳು . . .

೧. ಸರಸ್ವತೀ ಸೂಕ್ತ

೨. ಅಗ್ನಿಸೂಕ್ತ

೩. ಲಲಿತಾ

೪. ಯಾವ ದೇವನಿವನು ?

೫. ಗಾಳಿಗಡಲಿನಲ್ಲಿ

೬. ಕಣ್ಣ ಕಾಣಿಕೆ

೭. ಏಲಾಗೀತೆ

೮. ತುಂಬಿ

೯. ಪ್ರಾರ್ಥನೆ (ಮುಕ್ತಾಯ)

## ಸರಸ್ವತೀ ಸೂಕ್ತ

ಅಂಚೆ ಏರಿ ನೀರಿನಾಕೆ
ಗಾಳಿಯಲ್ಲಿ ಸುಳಿದಳೋ
ಬೆಳಕಿನಲ್ಲಿ ಬೆಳೆದಳು.

ಗಾಳಿ ನೀರನಾಡಿಸಿರಲು
ವೀಣೆಯಂತೆ ಬಾರಿಸಿ
ತೆರೆಗಳಾಗಿ ಬೆಳಕು ಬಂತು
ಕವಿವ ತಮ ನಿವಾರಿಸಿ ॥ ಅಂಚೆ ಏರಿ........

ನೀರಿನುಸಿರೆ ಮೇಲೆ ಹಾರಿ
ಬೆಳಕು-ಹಕ್ಕಿ ಬೆನ್ನ ಏರಿ
ಬಿಳಿಯ ಮೋಡ ಬೆಳಕಿನಲ್ಲಿ
ತೇಲುವಂತೆ ಬಂದಳೋ
ನೋಡು ಕಂದ ಎಂದಳು.॥ ಅಂಚೆ ಏರಿ....

ಅಹಾ ಅಹಾ ಏನು ಮುಖ !
ತುಂಬಿ ಬಂದ ಹಾಗೆ ಸುಖ
ಇದುವೆ ನನ್ನ ಜೀವ ಸಖ
ಎಂದು ನುಡಿಯು ಬಂದಿತು
ಜೀವ ತಾನೆ ಎಂದಿತು.॥ ಅಂಚೆ ಏರಿ....

ತುಟಿಯು ಮೇಲೆ ಏನು ನಗೆ
ಏನು ಭಾವ ಏನು ಬಗೆ
ದಾರಿ-ದೀಪ ಇದು ನಸಗೆ
ಕೊನೆಯು ವರೆಗು ತೋರಿತು
ಅಣುಕಣಕೂ ಸೇರಿತು ॥ ಅಂಚೆ ಏರಿ........

ಹೊಳೆವುದೇನು? ಏನು ಕಣ್ಣೊ!
ಮಿಡಿದರೊಡೆವ ದ್ರಾಕ್ಷಿ ಹಣ್ಣೊ-
ಅದರ ರಸವನುಣ್ಣು ಉಣ್ಣು
ಎಂದೆ ಜೀವ ಭಾವಕೆ
ಅದನು ಕಂಡ ಜಾವಕೆ ॥ ಅಂಚೆ ಏರಿ........

ಆಗ ಬಯಲೆ ಆವು ಆಗೆ
ಅದುವೆ ಹಾಲು ಕರೆದ ಹಾಗೆ
ಸುತ್ತು ಹಾಲು ಕರೆದಿತು
ಗಾಳಿ ಮೇರೆವರಿದಿತು ॥ ಅಂಚೆ ಏರಿ........

ಅಷ್ಟರಲ್ಲಿ ಕೇಳಬಂತು
ನುಡಿಸಿದಂತೆ ಪ್ರಾಣತಂತು
ಏರಿದಂತೆ ಇಂಚರ
ಆಕೆಗಿರುವ ಆಸರ ॥ ಅಂಚೆ ಏರಿ........

‘ ಹಾಲು ಬೇಕೆ ನೀರಿನಾಕೆ
ಕಂಡು ಕಂಡು ಸುಮ್ಮನೇಕೆ ?
ಬಾ ಎಂದು ಕರೆದಿತು
ಹಾಲಿನಲ್ಲಿ ಹರಿದಿತು ’ ॥ ಅಂಚೆ ಏರಿ . ....

—‘ ಏನು ಸವಿಯೊ ಅದನೆ ಕುಡಿ
ನಿನ್ನ ರುಚಿಯ ಹದವ ಹಿಡಿ
ನನ್ನನೇನು ಕೇಳುವೆ
ಆದರೂನು ಹೇಳುವೆ ॥ ಅಂಚೆ ಏರಿ .. ....

ನೀರು ಇರದ ಹಾಲು ಕೊನೆಗು
ಅಲ್ಲವೇನೊ ನೀರಸ
ಹೇಳು ನನ್ನ ಸಾರಸಾ
ಎಂಬ ಮಾತ ಕೇಳಿದೆ
ಕಣ್ಣು ತೆರೆದು ಹೇಳಿದೆ ॥ ಅಂಚೆ ಏರಿ........

‘ ಅಂಚೆ ಏರಿ ನೀರಿನಾಕೆ
ಗಾಳಿಯಲ್ಲಿ ಸುಳಿದಳೋ
ಬೆಳಕಿನಲ್ಲಿ ಬೆಳೆದಳು.’

ಕಲ್ಮಲ ಮಲ್ಮಲ ಜಂಜಣವೆಂದು
ಕುಣಿವುದು ಅಗ್ನಿಜ್ವಾಲೆ
ಗಾಳಿಯು ನೆಕ್ಕಲು ನಾಲಗೆ ಚಾಚುತ
ಉರಿದೇಳುತ್ತಿದೆ ಮೇಲೆ.

ಹರಹರನೆಂದು ಹರಿಹರಿಯೆಂದು
ಹರಿಹಾಯುತ್ತಿದೆ ಸುತ್ತು.
ಕರಿಬಿಳಿದಾಗಿ ತಲೆ ಎತ್ತುತ್ತಿದೆ
ಅತ್ತೂ ಇತ್ತೂ ಎತ್ತು.

ಬೆಂಕಿಯು ಮೊಳಕೆಯ ಕುಡಿಚಿಗುರೊಡೆದು
ಸಿಡಿಸಿಡಿದೇಳುತ್ತಿಹುದು.
ಕಿಡಿ ಕೆಂಡಾಗಿ, ನಿಗಿನಿಗಿ ಮಾಗಿ
ಬೆಳಕಿನೊಳಲರುತ್ತಿಹುದು.

ನೀಲಿ ಹಳದಿ ರಸಗೆಂಪು ಊದಿ ಹಸಿ-
ರೆನಿತೊ ಬಣ್ಣಗಳ ಸಾಲೆ.
ಮೇಲೆ ಮೇಲೆಸೆದು ಬೀಸಿದಂತಿಹುದು
ಚಿಗುರು ಪಕಳೆಗಳ ಮಾಲೆ.

ಯಾವ ಬಾನುಲಿ-ಕೇಂದ್ರದಲ್ಲಿ ಹಾಡುತ್ತಿರುವೆ
ನಿನ್ನ ರಾಗದ ಲಹರಿ ತೇಲಿ ಬಂದು
ನಮ್ಮನೆಚ್ಚರಿಸುತ್ತ ಕನಸು ಮರೆಯುವ ಹಾಗೆ
ಏಕೆ ಕಿವಿಗೆರೆಯುತ್ತ ಅಡಗಿ ಇರುವೆ ?
—ಕಣ್ತುಂಬಿ ಎದೆದುಂಬಿ ಎಂದು ಬರುವೆ ?
ಪಿಕವಾಣಿ ಶುಕಪಾಣಿ ದಿವ್ಯರಾಣೀ
ಓ ದೇವಿ! ಓ ತಾಯಿ! ಮಾಯಿ ಲಲಿತೇ !
ಈ ಆಟ ಈ ಮಾಟ ಏಕೆ ಕಲಿತೆ ?

ಬರಿ ನಿನ್ನ ನೆರಳಾಟ ಏಸು ದಿನ ನೋಡುವದೊ
ತೆರೆ ತೆರೆದು ಮೈತಳೆದು ಏಕೆ ತೋರೆ?
ಕಣ್ಣಿಗನ್ನವ ನೀಡಿ ಎದೆ-ಹಸಿವ ಕೆರಳಿಸುವೆ
ಈ ಲೀಲೆಯಲಿ ಯಾವ ಮೋಡಿ ಇಹುದೋ!
ನೆರಳು ತಿರುಳೂ ಕೂಡಿ ನೀನೆ ಅಹುದೋ
ಓ ಗೊಂಬೆ ! ಏನೆಂಬೆ ಕಾಣೆನೆಂಬೆ
ದೇವಿ! ಮಾದೇವಿ! ಮಾಮಾಯಿ ಲಲಿತೇ!
ಒಳಗನುದ್ದೀಪಿಸುತ ಒಳಗೆ ಕುಳಿತೆ.

ನಿನ್ನೊಂದು ಮೊಗವಾಗಿ ನಿನ್ನೊಬ್ಬ ಮಗುವಾಗಿ
ಬಾಳೇನು ಬದುಕೇನು ಜಪಿಸುತಿರುವೆ
ನಿನ್ನ ಬಸಿರಿನ ನೀರವಿೂನ ನಾನಾಗುತ್ತ
ಸುಮನ ಮನುವಾಗಿ ನಾ ಹೊರಗೆ ಬಂದು
ನಿನ್ನ ನಾಟಕದಲ್ಲಿ ಪಾತ್ರ ತಂದು
ಆಡುವೆನು ಹಾಡುವೆನು ನನ್ನ ನಾ ನೋಡುವೆನು
ದೇವ ದೇವನ ದೇವಿ ನಾಟ್ಯ ಲಲಿತೇ!
ದಯೆದೋರು ಶುಭ ಕೋರು ದೇವದಯಿತೇ!

ಕಲ್ಲು ಗುಡ್ಡವ ಕೊರೆದು ದೇವಾಲಯವ ತೆರೆದು
ಬಿಂಬದಲಿ ಸೌಂದರ್ಯ ತುಂಬುವಂತೆ
ಈಗೆನ್ನ ಮೈ ಕಟ್ಟಿ ಕೈ ತಟ್ಟಿ ಮನ ಮುಟ್ಟಿ
ಕಲ್ಪಿಸುವ ಶಿಲ್ಪಿ ನೀನಾಗಬೇಕು.
ನಿನ್ನಿಂದ ನನ್ನೊಳ್ಳಿತಾಗ ಸಾಕು
ಆರಯಿಕೆ ಹಾರಯಿಕೆ ಒಂದೆ ಬಯಕೆ-
ಚಿಚ್ಚಂಚಲೇ ದೇವಿ ಸಕಲ ಲಲಿತೇ!
ಅನುಪಮೇಯೇ ತಾಯಿ ಚಿರ ಅತುಲಿತೆ.

# ಯಾವ ದೇವನಿವನು?

ಮುಕುಟದಂತೆ ತಲೆ ಕೋಡು ಮೂಡುತಿದೆ ಯಾವ ದೇವನಿವನು ।
ಹಕ್ಕಿಯಂತೆ ಹಾರಾಡಿ ಬಯಲಲೀಸುವನು ನವೋನವನು ॥

ಮೇಲು ಬಗೆಯ ಮೊಲೆ ಹಾಲನುಂಡು ಬೀರುವನು ಕಂಪಿನುಸಿಲು ।
ಕಣ್ಣಿನಿಂದ ಬೆಳುದಿಂಗಳುಗುಳಿ ಬೆರಸುವನು ಬೆಳಕು ಬಿಸಿಲು ॥

ಕನಸಿನಣುಗನೋ, ಇವನ ಬಸಿರಿನಲೆ ಕನಸು ಬಂದವೇನೋ ।
ಮೀಸಲಾದ ತುಟಿಯಲ್ಲಿ ಕೂಸು-ನಗೆ ಮಿನುಗುವಂದವೇನೋ ॥

ನಿದ್ದೆ ಹೊದ್ದದಿಹ ಯಾವ ನಾಡಿನವನಣ್ಣ ಇಲ್ಲಿ ಬಂದೆ ।
ನನ್ನ ಎದೆಯೊಳೇ ಹುಟ್ಟಿ ಬಂದು ನನ್ನನ್ನೆ ಮುಸುಕಿ ನಿಂದೆ ॥

ಗಾಳಿಗಡಲಿನಲ್ಲಿ ತೇಲಿ ಬರುತಲಿಹವು ನಾದಾ
ಭಂಡವಾಳದಂತೆ ತುಂಬಿ ವಿವಿಧ ಭಾವ ಮೋದಾ
ಯಾವ ಗೆಳೆಯ ಗುರುವಿನಿಂದ ಬಂದಿತೋ ಪ್ರಸಾದಾ
ಎನುವೆ ಹೈ ಹಸಾದಾ ‖

ಎಚ್ಚರವೋ ? ನೂತ್ನ ವಿಶ್ವ; ಕನಸೆನಲೋ ? ವಾಸ್ತವಾ,
ನಿದ್ದೆಯೆನ್ನೆ ಸಾಕ್ಷಿಯಿಹೆನು; ಬೇರೆ ಏನೊ ಅನುಭವಾ
ವೈ ಮನಗಳ ಹೆಣೆಯುತಿಹುದು ಏನು ಇದರದೀ ಜವಾ
ನವಜೀವದ ಸಂಭವಾ ‖

ತಾಯಿಗಣ್ಣು ತುಳುಕುತಿಹುದು ಚಂದ್ರಬಿಂಬದಲ್ಲಿ
ಚುಕ್ಕೆ ಅಣ್ಣ-ತಮ್ಮನಂತೆ ಕರೆವವಿರುಳಿನಲ್ಲಿ
ದಾರಿದೋರಿ ತೆರೆಯುತಿಹವು ಸೂರ್ಯಕಿರಣವೆಲ್ಲಿ
ಹೊತ್ತಿ ಚಿತ್ತದಲ್ಲಿ ‖

ಬಿತ್ತಿದಾವ ಬೆಳೆಯು ಬಂತು ಯಾವ ಸುಗ್ಗಿ ಕಾಲಾ
ಕಾದ ಕಣ್ಣು ಮೋದದಿಂದ ತೋದು ತೊರೆಯೆ ಹಾಲಾ
ಎಷ್ಟುಕೆಷ್ಟು ಕರುಣೆಯಿಂದ ಬೆಳೆದ ಹಾಗೆ ಆಲಾ
ಹಬ್ಬಿಕೊಂಡು ಮೇಲಾ ‖

ಮಾತು ಹೂತು ಪೂಜೆಯಾಗಿ ತೋರುತಿಹುದು ತಮ್ಮಡಿ
ನಡೆಯು ಗತಿಯೆ ತಾಳಲಯವು ಛಂದ ರಾಗ ನುಡಿ ನುಡಿ
ಆಡಿದಂತೆ ಮೂಡುತಿಹುದು ಕನ್ನಡವೇ ಕನ್ನಡಿ
ಪಾದಸಾಕ್ಷಿ ನಿನ್ನಡಿ ‖

ಅಂತರಂಗದಾ ಮೃದಂಗ ಅಂತು ತೋಂ ತನಾನಾ ।
ಚಿತ್ತ ತಾಳ ಬಾರಿಸುತ್ತಲಿತ್ತು ಝುಂಝುಣಾಣಾ ।
ನೆನವು ತಂತಿ ಮೀಟುತಿತ್ತು ತಂತನನನ ತಾನಾ ॥ ಅಂತರಂಗದಾ....

ಹಲವು ಜನುಮದಿಂದ ಬಂದ ಯಾವುದೋನೋ ಧ್ಯಾನಾ ।
ಏಕನಾದದಂದದೊಂದು ತಾನದಾ ವಿತಾನಾ
ತನಗೆ ತಾನು ಸೋಲುತಿಹುದು ನೂಲುತಿಹುದು ಗಾನಾ ॥ ಅಂತರಂಗದಾ....

ಕಲ್ಪದಾದಿಯಲ್ಲೆ ನನ್ನ ನಿನ್ನ ವಿರಹವಾಗಿ ।
ಎಲ್ಲೊ ಏನೋ ನಿನ್ನ ಹುಡುಕಿ ಕಾಂಬ ಕಣ್ಣೆ ಹೋಗಿ
ಮರವೆಗೊಂಡು ಬಿದ್ದೆ ನಾನು ನೆಲದ ಮಣ್ಣು ತಾಗಿ ॥ ಅಂತರಂಗದಾ....

ಅಂತರಿಕ್ಷದಲ್ಲಿ ಮಸಗಿ ಕಳೆದ ಕಣ್ಣ ಸಂತೆ
ವೈಯ್ಯ ಕಣ್ಣ ಕುಣಿಯೊಳಾಯ್ತು ಚಿತೆಯು ಹಾಗೆ ಚಿಂತೆ
ನೆಲದ ಎದೆಗೆ ಇರುಳು ಬರುವ ಮರುಳ ಉಲ್ಕೆಯಂತೆ ॥ ಅಂತರಂಗದಾ....

ಕರುಳ ಕಲಕುಮಲಕಿನಲ್ಲಿ ಕುದಿದು ಕುದಿದ ಹಾಲೆ
ಹೃದಯರಾಜ್ಯವನ್ನು ನೆಕ್ಕಿ ಬಂದ ಕಿಚ್ಚು ಮೇಲೆ
ಹಸಿದ ಕಂಗಳಲ್ಲಿ ಹೊತ್ತಿತೆಂದೊ ಆಗಿ ಜ್ವಾಲೆ ॥ ಅಂತರಂಗದಾ....

ಅದರ ನೋವೊ ಅದರ ಕಾವೊ ಬಲ್ಲದದುವೆ ಪಾಪ
ಏಸು ತೋಡಿಕೊಂಡರೇನು ತೀರಲಹುದೆ ತಾಪ ?
ತನ್ನ ಸ್ನೇಹ ತಾನೆ ಉರಿಸಿ ಬೆಳಗಿಸುವದೊ ದೀಪ ॥ ಅಂತರಂಗದಾ....

ಹಣೆಯ ಕಣ್ಣು ಹುರಿದ ಮೇಲನಂಗವಾದ ಭಾವ
ತಾನೆ ರಸವೆ ಆಯ್ತು ಸೋಕೆ ಮೂಲ ರತಿಯ ತೀವ
ಕಣ್ಣೆನಾರತಿಯನು ಎತ್ತಿ ಒತ್ತಿ ಬಂತು ಜೀವ ॥ ಅಂತರಂಗದಾ.......

ಎದೆಯ ತೊರಿಸಿ ಕಣ್ಣು ತೆರಿಸಿ ಹೋದ ಮಾಟ ನೋಟ
ಮರಳಿ ಬಂದು ಕಣ್ಣು ಕೊಟ್ಟು ಹೃದಯ ಜೀವ ಕೂಟ
ಸೃಷ್ಟಿಯನ್ನೆ ನಡೆಸುತಿಹುದು ಆಗಿ ಆಟ ಪಾಟ ॥ ಅಂತರಂಗದಾ.......

ಕತ್ತಲಲ್ಲೆ ಬೆಳಕು ಮಿಂಚಿ ಪಡೆದಿತೇಳು ಬಣ್ಣ
ಮೂಕ ಮಾನ ತೂಕ ಮೀರಿ ದನಿಯು ಹುಟ್ಟಿ ಸಣ್ಣ
ಕಣ್ಣು ಮಣ್ಣು ಕೂಡಲಲ್ಲಿ ಹಾಡು ಕಟ್ಟಿತಣ್ಣ ॥ ಅಂತರಂಗದಾ.......

ಏಲಾವನ ಲವಲೀಬನ ಲವಂಗ ಬನಗಳಲಿಽ
ನಾಗಲತಾ ಸಂಕುಲ ಬನವಾಸಿಯು ಜನಗಳಲಿಽಽಽ
ಲೀಲಾಂದೋಲಿತ ದೋಲಾ ಲಲನಾ ಮಣಿಗಳಲಿಽಽ

ಏಲಾಪದ ಲೀಲಾಪದ ಆಲಾಪದ ಸರಣೀಽ
ಸಖಸಖಿಯರ ಮೇಳಾಪದೆ ತೆರೆದಿರೆ ಎದೆ ಭರಣೀಽ
ಆಲಿಸುತಿವೆ ಮಾಲಿಸುತಿವೆ ಹರಿಣದ ಜತೆ ಹರಿಣೀಽ

ಓ ಇಾಣನಮಾ, ಅಂ ಜ್ಞಂ ಓಂ, ಜಂ ಸಂ ಶಂ ಎಂಬಾ
ಅಂಬಾಗರೆವುದು ವಾಣಿಯ ವೀಣೆಯು ಬಾಯ್ತುಂಬಾ
ಬಾ ಅಮ್ಮಾ ತಮ್ಮಾ ಬಾ ಬಾರೇ ಜಗದಂಬಾ.

ಉಸಿರುಸಿರಲಿ ಸರಿವರಿದೂ ಊದೂದುತ ನಲಿದು
ದನಿಯೇ ನದಿಯೊಲು ಚಲಿಸಿತು ಕೊಂಕೊಂಕೆನೆ ಒಲಿದು
ಅಲೆಯಾಯಿತು ಬಲೆಯಾಯಿತು ಜಗದಗಲಕೆ ಸೆಲೆದು.

ಕಿನ್ನರಕಿನ್ನರಿ ಮಿಥುನವು ಆರೆಆರೆ ಮೈಗೂಡಿ
ನುಡಿಯಲಿ ಹುದುಗಿದ ಹುರುಳೊಲು ಹದುಳದೊಳೊಡಮೂಡಿ
ನಾಲಿಗೆ ನಾಡಿಯ ನಾಡಿಸಿ ಸ್ವರಮೂರ್ತಿಯ ಕೂಡಿ.

ನರನರಗಳಲಿಂಗಿಂಗೀ ನರನಾಳದೆ ತಂಗಿS
ಲಾಸ್ಯದಿ ಹಾಸ್ಯವ ಮಿಂಚಿಸಿ ಪರಶಿವನರ್ಧಾಂಗಿSS
ತಾಲದಿ ಕಾಲವ ಸೊಲ್ಲಿಸುವಂತಿದೆ ಈ ಭಂಗಿSS

ನೆಲೆಗೆಡಿಸುವ ವಾಸನೆಗಳ ಎದೆಬೀಜವ ಸೀಳಿ
ರತಿರಮಣನ ನಿಜಜನಕನ ಎದೆಯಾಳವನಾಳಿ
ಹೃದಯಾಕೂತಿಯು ಅನುಪಮ ಲಾವಣ್ಯವ ತಾಳಿ.

ಸ್ವಾದದ ನಾದದ ಮೋದದ ಒಳಬಸಿರನೆ ಬಗೆದು
ಹುಂಕಾರದ ಒಳನೂಲನು ಮೆಲ್ಲನೆ ಹೊರದೆಗೆದು
ಶಬ್ದಕೆ ಹಾಸಿಗೆಯಾಗಿಹ ತನಿಮೌನದಿ ಮುಗಿದು.

ಯಾಳದ ಜತಿ, ಏಳಿಯು ಗತಿ ಏಳೇಳೇಳೆಂದು
ಎಬ್ಬಿಸಿ, ಮಬ್ಬನು ಚೆದರಿಸಿ ಬಾಳ್ ಬಾಳ್ ಬಾಳೆಂದು
ತಂತಿಯು ತಾಳಕೆ ಮಿಡಿದಿರೆ, ಎಲ್ಲಾಯಿತು ಒಂದು.

ಏಳಿಯು ಬಸಿರೊಳು ಮಲಗಿದ ಯಾವುದೊ ಗತಿ ಚಿತ್ರ
ದನಿ ಪಡೆದಿತು, ತಿಳಿದೆದ್ದಿತು ಕಣ್ಬಡೆದು ವಿಚಿತ್ರ
ಆಕ್ಷಣವನು ಈಕ್ಷಣವನು ಮಾಡಿತು ಸುಪವಿತ್ರ.

## ತುಂಬಿ

ಈ ಇದೂ ತುಂಬಿ ಆ ಅದೂ ತುಂಬಿ ಯಾವುದೂ ತುಂಬಿ ಇರದೇ
ತುಂಬಿ ಕಳೆದರೂ ತುಂಬಿ ಉಳಿದರೂ ತುಂಬಿ ತುಂಬಿ ಬರದೇ
ಜನನ ಮರಣದಲಿ ಅಮೃತವೆಂದಿಗೂ ಅಹುದು ತುಂಬಿ ತುಂಬಿ
ಮೈದುಂಬಿ ತುಂಬಿ ಹಲಜೀವ, ದೇವ ಜಗದಂಬೆ ತುಂಬಿ ತುಂಬಿ.

ಮೇಲೊಳಗು ಹೊರಗು ಪಡೆದಾತ ತುಂಬಿ ಹಡೆದಾಕೆ ತುಂಬಿ ತುಂಬಿ
ಬಯಲಲ್ಲು ಎಲ್ಲು ಮಿಡಿವವಳು ತುಂಬಿ ದುಡಿವವನು ತುಂಬಿ ತುಂಬಿ
ಕಲುಗುಡ್ಡ ತುಂಬಿ ಮರಬಳ್ಳಿ ತುಂಬಿ ಹಸುಹಕ್ಕಿ ತುಂಬಿ ತುಂಬಿ
ಅಣುರೇಣು ತುಂಬಿ ಪರಮಾಣು ತುಂಬಿ ಜೀವಾಣು ತುಂಬಿ ತುಂಬಿ.

ತುಂಬಿದ್ದು ತಾನೆ ಎಂದೆಂದು ತುಳುಕದೆಂದೆಂದರೂನು ತುಂಬಿ
ತೂತೂಬು ತುಂಬಿ ಹೊರಸೂಸಿ ಚೆಲ್ಲಿ ತುಳುಕಾಡಿ ಮತ್ತೆ ತುಂಬಿ.
ಮುಮ್ಮೊದಲೆ ತುಂಬಿ ಮೊಳಕೆಯಲಿ ತುಂಬಿ ಚಿಚ್ಚಿಗುರಿನಲ್ಲಿ ತುಂಬಿ
ಎಲೆ-ನಗೆಯು ತುಂಬಿ ಹೂ-ಹೀಚು ತುಂಬಿ ಮಿಡಿ-ಕಾಯಿ-ಹಣ್ಣು ತುಂಬಿ.

ಕ್ರಿಮಿ-ಕೀಟ ತುಂಬಿ ಈಟೀಟು ತುಂಬಿ ದನಿಮೀಟು ತುಂಬಿ ತುಂಬಿ
ಇದ್ದದ್ದು ತುಂಬಿ ಇಲ್ಲದ್ದು ತುಂಬಿ ಅಹುದಲ್ಲದೆಲ್ಲ ತುಂಬಿ
ನರತ್ಯಾಗ ತುಂಬಿ ಸುರಭೋಗ ತುಂಬಿ ವರಯೋಗ ತುಂಬಿ ತುಂಬಿ
ಪೊಳ್ಳಿಲ್ಲ ತುಂಬಿ ಜೊಳ್ಳಿಲ್ಲ ತುಂಬಿ ಶೂನ್ಯಾಽಕಾರ ತುಂಬಿ.

ನೆಲ ಹೂತು ತುಂಬಿ ಮನಸೋತು ತುಂಬಿ ಉಸಿರಾಟ ತುಂಬಿ ತುಂಬಿ
ಜಗವರಳಿ ಕಂಡು ಕಣ್ತುಂಬಿ ಮರಳಿ ಮರುಳಾಗಿ ತುಂಬಿ ತುಂಬಿ
ರಸದುಂಬಿ ತುಂಬಿ ನಾಲಗೆಯು ಎಂಬ ದುರದುಂಬಿ ತುಂಬಿ ತುಂಬಿ
ಝೇಂಕಾರ ಕೇಳಿ ಕಿವಿತುಂಬಿ ತುಂಬಿ ಓಂಕಾರ ತುಂಬಿ ತುಂಬಿ.

ಅಗೊ ತುಂಬಿ ಬಳಗ ಹಲ ಬಿಂಬಿಯೊಳಗ ಒಳನಿಂಬಿ ತೋಟ ತುಂಬಿ
ಉಕ್ಕಂದದಿಂದ ಚಕ್ಕಂದವಾಡಿ ನಕ್ಕಂದವಾಗಿ ತುಂಬಿ
ಭೋರಾಡತಾವ ಹಾರಾಡತಾವ ಒಡಗೂಡತಾವ ತುಂಬಿ
ಒಳಗೋಡತಾವ ಹೊರದೂಡತಾವ ಒಳವೂಡತಾವ ತುಂಬಿ.

ವೈಮುಟ್ಟಿ ಬಂತು ಮುಟ್ಟಾಟ ಇದರ ಅಟಮಟದ ಮಾಟ ತುಂಬಿ
ವೈನವಿರ ನವಿಲು ತಕತೈಯ್ಯ ಕುಣಿದು ಥಕ್ಕಾಗಿ ನಿಂತು ತುಂಬಿ
ಜಲ್ಪನೆಯ ತುಂಬಿ ಕಲ್ಪನೆಯ ತುಂಬಿ ಎದೆಯಂತರಾಳ ತುಂಬಿ
ಆಪಾದ ತುಂಬಿ ಆಸ್ವಾದ ತುಂಬಿ ಆಮೋದ ಭೇದ ತುಂಬಿ.

ಆ ತುಂಬಿನಿಂದ ತುಟಿವರೆಗು ತುಂಬಿ ತುದಿವರೆಗು ತುಂಬಿ ತುಂಬಿ
ಅಂಗಾಂಗ ತುಂಬಿ ಲಿಂಗಾಂಗ ತುಂಬಿ ಆಲಿಂಗನಾಂಗ ತುಂಬಿ
ಆಚಾರ ತುಂಬಿ ಉಚ್ಚಾರ ತುಂಬಿ ಸಂಚಾರ ತುಂಬಿ ತುಂಬಿ
ವಿಶ್ರಾಂತಿ ತುಂಬಿ ಸ್ಥಿರ ಶಾಂತಿ ತುಂಬಿ ಕಡು ಕಾಂತಿ ತುಂಬಿ ತುಂಬಿ.

ಅಂಭೋಜನೇತ್ರೆ ರಂಭೋರು ತನ್ನ ಕುಂಭುರೋಜಾತದಲ್ಲಿ
ಸುಚರಿತ್ರೆ ದಿವ್ಯವಾತ್ಸಲ್ಯದಲ್ಲಿ ಒರಗಿರಿಸಿ ನಾದವಲ್ಲಿ
ತಂಬೂರಿ ಶ್ರುತಿಗೆ ಸೀತಾರ ಜತಿಗೆ ದಿಡದಾದಿ ಮೀಟ ದಾಟ
ಕುಂಭಿನಿಯ ತುಂಬಿ ಅಂಬರವ ತುಂಬಿ ತುಂಬಿಸಿದಳೆಂಥ ಲಹರಿ.

ಗುರುವಿಂದ ತುಂಬಿ ಅರವಿಂದ ತುಂಬಿ ತುಂಬುರುವಿನಿಂದ ತುಂಬಿ
ತಾಯೆಂದು ತುಂಬಿ ತಂದೆಂದು ತುಂಬಿ ಕಂದನ್ನ ತನ್ನ ತುಂಬಿ
ಅಂಬಿಕೆಯ ತುಂಬಿ ನಂಬಿಕೆಯ ತುಂಬಿ ಕಣ್ಣೊಂಬೆರಂಭೆ ತುಂಬಿ
ಶ್ರೀಮಾತೆ ತುಂಬಿ ಈ ಮಾತೆ ತುಂಬಿ ತಂತಾನೆ ಬಂತು ತುಂಬಿ.

# ಪ್ರಾರ್ಥನೆ

ಕೂಡಿ ಓದಿ ಕೂಡಾಡಿ ಕೂಡಿ ಅರಿಯೋಣ ಕೂಡಿ ಕೂಡಿ
ಕೂಡಿ ತಿಂದು ಕೂಡುಂಡು ಕುಡಿದು ದುಡಿಯೋಣ ಕೂಡಿ ಕೂಡಿ
ಕೂಡಿ ನಡೆದು ಒಡಗೂಡಿ ಪಡೆದು ನುಡಿ ಹೇಳಿ ಕೇಳಿ ಕೂಡಿ
ಕೂಡಿ ಬೆಳೆದು ಬೆಳಗೋಣ ದೇವರೊಲು ಕೂಡಿ ಕೂಡಿ ಕೂಡಿ

*

# ಮೊದಲ ಚರಣಗಳು ( ಅಕಾರಾದಿಯಾಗಿ )

## ಮೊದಲ ಚರಣಗಳು

# ಭಾವ-ಸಂದರ್ಭ-ಸೂಚನೆ . . .

## ಪರಿವಿಡಿಯ ಕ್ರಮದಲ್ಲಿ

೧ ಈ ಸಂಗ್ರಹದ ಮೊದಲನೆಯ ಹಾಗು ಕೊನೆಯ 'ಪ್ರಾರ್ಥನೆ'ಗಳು ಉಪನಿಷನ್ಮಂತ್ರಗಳ ಛಾಯೆ.

೨ ಗಂಗಾಷ್ಟಕವು ಕಾಶಿ, ಹರದ್ವಾರ, ಹೃಷಿಕೇಶಗಳಲ್ಲಿ ಗಂಗೆಯ ವೈಭವವನ್ನು ಅನುಭವಿಸಿದ ಮೇಲೆ ಬಂದ ಉದ್ಗಾರ.

೩ ಗಂಗಾವತರಣಕ್ಕೆ ನಿಮಿತ್ತಮಾತ್ರವಾದದ್ದು ಬಂಗಾಲದೊಳಗಿನ ಬರಗಾಲದ ರೌದ್ರಪ್ರಸಂಗ. ಅವ್ಯಾಜ ಕರುಣೆಯ ನಿರಂತರ ಅವತಾರ ಈ ಗಂಗಾಸ್ತೋತ್ರ ಎಂಬ ಸ್ಥಾಯೀಭಾವದಲ್ಲಿ ಈ ಕವನದ ಉಗಮವಿದೆ.

೪ ಕೌಟುಂಬಿಕ ಭಾವಗೀತೆಗಳಲ್ಲಿ 'ಬಾರೊ ಸಾಧನಕೇರಿಗೆ' ಎಂಬ ಕವನ ಧಾರವಾಡದ ನಮ್ಮ ಮನೆಯ ಸುತ್ತಲಿನ ನಿಸರ್ಗದ ಒಂದು ಚಿತ್ರ.

೫-೬ 'ನಾನು' ಮತ್ತು 'ಅಂಬಿಕಾತನಯ ದತ್ತ' ಇವೆರಡು ನನ್ನ ಜೀವ ಯಾವ ಜೀವನಪಥವನ್ನು ಹಿಡಿದಿದೆ, ಏಕೆ ಹಿಡಿದಿದೆ ಎಂಬುದರ ಧ್ಯಾನದಿಂದ ಬಂದುವು.

೭ 'ತೇಲಾಡುವಾಗ ಮನಸು' ಎಂಬ ಕವನದ ಸಂದರ್ಭ ಮಿಶ್ರಸ್ವರೂಪದ್ದು. ಒಂದು ಇಣಚಿಯ ಮರಣಕ್ಕೆ ನಾನೂ ಕಾರಣನಾದೆ ಒಮ್ಮೆ. ಅಂದು ರಾತ್ರಿ ಬಿದ್ದ ಎರಡು ಕನಸುಗಳಲ್ಲಿ ಒಂದು ನನ್ನ ತಾಯಿ ಧೈರ್ಯ ಕೊಡುವಂತಿತ್ತು. ಇನ್ನೊಂದರಲ್ಲಿ ನಾನು ಹೇಳಿದ ಒಂದು ಕವನ ಕೇಳಿ ಅಣ್ಣ ಮಾಸ್ತಿ ಮೆಚ್ಚಿದಂತಿತ್ತು. ಎಚ್ಚರಾದ ಮೇಲೆ ಅದರೊಳಗಿನ ನಾಲ್ಕೇ ಸಾಲು ನೆನಪುಳಿದವು. ಈ ಮೂರು ಘಟನೆಗಳ ಒಳಸೂತ್ರದ ಭಾವ ಇಲ್ಲಿಯ ಕವನದ ದ್ರವ್ಯವಾಗಿದೆ.

೮ 'ಘಜಾರಗಟ್ಟಿ' ಎಂಬುದು ಪುಂಡರೀಕ-ಮಹಾಶ್ವೇತೆ, ರಂಭೆ-ತುಂಬುರು ಇವರ ಸಂಬಂಧಗಳಂತೆ ಜೀವ ಪುರುಷ ಮತ್ತು ಜೈನಿಕ-ಪ್ರಕೃತಿಯಲ್ಲಿ ಒಂದು ಸಂಬಂಧ ವ್ಯಂಜಿತವಾದಾಗ ಇದನ್ನು ಬರೆಯಬೇಕಾಯಿತು.

೯ 'ಬರುವದೇನೆ ನೆಪ್ಪಿಗೆ' ಸಖೀಗೀತಕ್ಕೆ ಪ್ರಸ್ತಾವನೆಯಾಗಬಹುದಾದ ಕವನ. ನನ್ನ ಮಗಳು ಚಿ. ಮಂಗಲೆಯ ನಿಮಿತ್ತವಾಗಿ ಮುಂದಿನ ಮೂರು ಕವನಗಳು ಹುಟ್ಟಿಕೊಂಡವು:

೧೧ ಕನಸಿನ ಕಥೆಯು ನಿಜವಾಗಿಯೂ ಒಂದು ಕನಸಿನ ಕಥೆಯು. ಅದರ ಅರ್ಥ

ಕ್ಕಿಂತ ಆ ಕನಸಿನ ರೀತಿಯೇ ರಮ್ಯವಾಗಿ ತೋರಿತು. ಅದರ ರಹಸ್ಯ ನನಗೂ ಇನ್ನೂ ಗೂಢವೇ.

೧೨ 'ಸಂಜೆಯ ಜಾವಿಗೆ' ತನ್ನ ಮಗಳ ಮುಂದಿನ ಬಾಳು ಕಲ್ಯಾಣಕರವಾಗ ಬೇಕು ಎಂದು ಬಯಸುವ ಯಾವ ತಂದೆಗೂ ಹೊಳೆಯುವಂಥದು. ನೀರನು ಹೊತ್ತು ತರಲು ಅರಿಯದ ಬಾಲೆ, ನೀರು ಹೊತ್ತು ತರಬೇಕಾದ ಪ್ರದೇಶದಲ್ಲಿ ಹೇಗೆ ಬಾಳುವೆ ಮಾಡಿಯಾಳು ? ಅಂಥ ಪ್ರಸಂಗ ಬಂದರೆ ಆಕೆಯನ್ನು ಅಲ್ಲಿಯೂ ಕಾಯುವ ದೈವ ಅವಳ ಸುತ್ತಿರಲಿ ಎಂದು ಆಶೀರ್ವದಿಸುತಿದ ಇಲ್ಲಿಯ ಭಾವ

ಈ ಗುಂಪಿನಲ್ಲಿ ಬರುವ ಕವನಗಳು ನನ್ನ ಜೀವನವನ್ನು ಒಂದಿಲ್ಲೊಂದು ಬಗೆ ಯಿಂದ ಉದ್ದೀಪಿಸಿದ ವ್ಯಕ್ತಿಗಳನ್ನು ಕುರಿತು ಇವೆ.

೧೩ 'ಜಾನಕಮ್ಮ' ಈಗಾಗಲೇ ದಿವಂಗತರಾದರು. ಅವರ ಕವನಸಂಗ್ರಹ ಪ್ರಸಿದ್ಧವಾಗಿದೆ. ಅವರು ನನ್ನನ್ನು ಕುರಿತು ಬರೆದ ಒಂದು ಕವನಕ್ಕೆ ಇದು ಉತ್ತರರೂಪವಾದದ್ದು.

೧೪ 'ಸಂಭಾವನೆ'ಯು ಕನ್ನಡದ ಕಣ್ವರೆಂದೆನಿಸಿಕೊಂಡ ಶ್ರೀಕಂಠಯ್ಯನವರ ಸಂಭಾವನೆಯ ಕಾಲಕ್ಕೆ ಬರೆದದ್ದು. ಈಗ ಅವರೂ ದಿವಂಗತರು.

೧೫ ಪಂಪನನ್ನು ಕುರಿತ ಸುನೀತ ಸಹಸ್ರವಾರ್ಷಿಕದ ಉತ್ಸವದ ಕಾಲಕ್ಕೆ ಬರೆದದ್ದು.

೧೬ ಈ ಸುನೀತ ನನ್ನ ತರುಣ ಮಿತ್ರರೂ ಅನೇಕ ಕಲಾವಿದರೂ ಆದ ಶ್ರೀ. ಎಸ್. ಎನ್. ಸ್ವಾಮಿ ಅವರು ಬರೆದ ಒಂದು ಚಿತ್ರದ ಜೊತೆಗೆಂದು ಬರೆದದ್ದು.

೧೭ ಬುದ್ಧನನ್ನು ಕುರಿತ ಪದ್ಯ ವೈಶಾಖ ಪೌರ್ಣಿಮೆಯ ದಿನ ಒಂದು ಮೌನ ವಾರ ದಲ್ಲಿ ಬರೆದೆ. ಸಕಲ ಮಾನವಹೃದಯಾಂತರ್ಗತ ಅಸುಪ್ತ ಬೋಧವೇ ಅವನ ಅವತಾರದ ಕುರುಹು ಎಂಬ ಸಂವೇದನೆಯಲ್ಲಿ ಇದು ಅಂಕುರಿಸಿತು.

ನಮ್ಮ ದೇಶದ ಸ್ಥಿತಿ ಮತ್ತು ನಮ್ಮ ಸದ್ಯದ ಸಾಮಾಜಿಕ ಪರಿಸ್ಥಿತಿ ಇವುಗ ಳೊಳಗಿನ ಕೆಲವು ವಿಶೇಷ ಸಂದರ್ಭಗಳಲ್ಲಿ ಮುಂದಿನ ಗುಂಪಿನ ಕವನಗಳು ಮೂಡಿವೆ.

೧೮ 'ಒಂದೇ ಕರ್ನಾಟಕ' ಎಂಬ ಕವನ ಪರಿಹಾಸ-ವಿನೋದ ಎಂಬಂತೆ ಬರೆದರೂ ಇಂದು ಅದು ಪರಮಾರ್ಥವಾಗಿ ನಿಂತಿದೆ.

೧೯ 'ನೀವಾರಲಾ- ಯಾರೋ ಯಾರೋ' ಎಂಬ ಕವನದ ಪಲ್ಲವಿಯನ್ನು ಒಂದು ದಸರೆಯ ದಿನದ ಮುಂಜಾವಿನ ಕನಸಿನಲ್ಲಿ ನವಯುಗದ ಯುವಕರ ತಂಡಕ್ಕೆ

ನಾನು ಹೇಳುತ್ತಿದ್ದೆ. ಹಾಡು ಮರೆತು ಹೋಗಿದೆ. ಪಲ್ಲವಿ ಬೇರೊಂದು ಹಾಡನ್ನು ಹುಟ್ಟಿಸಿದೆ.

೨೦ ಸೊಲ್ಲಾಪುರಕ್ಕೆ ಬಂದ ಹೊಸದರಲ್ಲಿ ಸುತ್ತಲಿನ ಎಲ್ಲ ಪರಿಸ್ಥಿತಿಯನ್ನು ಕಂಡು ಉಂಟಾದ ಕ್ಷೋಭ, ಆಮೇಲೆ ಬಂದ ಶಾಂತಿಯಲ್ಲಿ ತಲೆಯೆತ್ತಿದ ಧೈರ್ಯ ಇದಕ್ಕೆ ಕಾರಣವಾಗಿವೆ.

೨೧ 'ಪಡುವಲ ಕಡಲ ಹಾಡು' ಗೋಕರ್ಣಕ್ಕೆ ಹೋಗಿ ಅಲ್ಲಿಯ ಗೆಳೆಯರೊಡನೆ ಸಮುದ್ರವಿಹಾರ ಮಾಡಿ ಬಂದ ಮೇಲೆ ಬರೆದದ್ದು.

೨೨ 'ಬಂದಿತಾರಾ ಶ್ರಾವಣಾ' ಎಂಬುದು ನನ್ನ ಶ್ರಾವಣಗೀತಮಾಲೆಯಲ್ಲಿ ಒಂದು. ಇನ್ನೂ ಅಪ್ರಕಟಿತ ಶ್ರಾವಣಗೀತೆಗಳಿವೆ ಶ್ರಾವಣದಲ್ಲಿಯೇ ಶ್ರೀಕೃಷ್ಣ ಜನ್ಮವಾಯಿತು. ಶ್ರೀ ಅರವಿಂದರ ಜನ್ಮವಾಯಿತು. ಅದೇ ತಿಂಗಳಲ್ಲಿ ನಮಗೆ ಸ್ವಾತಂತ್ರ್ಯ ದೊರಕುವದು; ೧೯೪೪ರಲ್ಲಿ ಬರೆದ ಕವನ ಇದು.

೨೩ 'ಅನ್ನಯಜ್ಞ'ವನ್ನು ಕುರಿತು ಬರೆವ ಮಾತುಗಳು ಮೇಲೆಯೆ ತಿಳಿಯುವಂತಿವೆ.

೨೪ 'ನರ್ಸ' ಕವನದ ಮಾತೂ ಮೇಲೆಯೆ ಹೊಳೆಯುತ್ತದೆ.

ಪ್ರೇಮಗೀತೆಗಳಲ್ಲಿಯ ಒಂಬತ್ತು ಬೇರೆ ಬೇರೆ ಕಾರಣಗಳಿಂದ ಬಂದಂಥವು.

೨೫ 'ಅಪರೂಪರಾಗ'ದ ಧಾಟಿ ಮತ್ತು ಪಲ್ಲವಿ ನಾನೊಂದು ಬೆಳಗಿನ ಕನಸಿನಲ್ಲಿ ಹೇಳುತ್ತಲಿದ್ದದ್ದು. ಅದರ ಭಾವವೂ ಸ್ವಪ್ನಾಕಾಶದಂತೆ ಅತಿ ವಿರಲವಾಗಿದೆ.

೨೬ 'ಒಂದು ಹಾಡು' ಅಪೂರ್ಣಪದ್ಯ.

೨೭ 'ವಿರಹಿ-ಚುಂಬಿತ' ಇದು ಒಂದು ಗೀತಕಥೆಯಲ್ಲಿ ಬರಬೇಕಾದ ಹಾಡು.

೨೮ 'ದವನ ಕವನ' ಇದೂ ಒಂದು ಗೀತಕಥೆಯಲ್ಲಿ ಬರಬೇಕಾದ ಹಾಡು

೨೯ 'ಗಮಗಮಾಡಸ್ತಾವ' ಇದೂ ಒಂದು ಗೀತಕಥೆಯಲ್ಲಿ ಬರಬೇಕಾದ ಹಾಡು. ಈ ಮೊದಲು ಪ್ರಸಿದ್ಧನಾದ ದವನದ ಹುಣ್ಣಿಮೆಯ ಜಾತ್ರಿಯ ರಾತ್ರಿಯು (ಹಾಡು-ಪಾಡು) ಇದೇ ಮಾಲಿಗೆ ಸೇರಬೇಕು.

೩೦ ಕೃಷ್ಣನನ್ನು ನೋಡುತ್ತ ಮೈಮರೆತು ಕುಳಿತ ಒಬ್ಬ ಗೋಪಿಯ ಹಳೆಯ ಚಿತ್ರ ನೋಡಿ ಈ ಹಾಡಿನ ಸ್ಫುರಣವಾಗಿದೆ

೩೧ 'ತಾಜಮಹಾಲ' ಎಂಬ ಅಷ್ಟಷಟ್ಪದಿಯು ಆ ಜಗದದ್ಭುತವನ್ನು ನೋಡಿ ಬಂದ ಮೇಲೆ ಬರೆದೆ.

೩೨ 'ಶಿವದೃಷ್ಟಿ'ಯು ಹರಿಹರನ ಗಿರಿಜಾಕಲ್ಯಾಣದಲ್ಲಿ ಗಿರಿಜಾದೃಷ್ಟಿಯನ್ನು ಕುರಿತು ಬರೆದ ಶ್ಲೋಕದಿಂದ ಪ್ರೇರಿತವಾಗಿದೆ.

೩೩ 'ಕೊಡುವುದೇನು-ಕೊಂಬುದೇನು' ಎಂಬುದು ನನ್ನ 'ತುಂಬಿ ಬಂದಿತ್ತು' ಎಂಬ

ಕವನದಂತೆ, 'ತಲೆದಂಡ' ನಾಟಕಕ್ಕೆ ಸೇರಿದ್ದು. ಅದನ್ನು ಕಿನ್ನರಿ ಬೊಮ್ಮಯ್ಯ ಹೇಳುತ್ತಾನೆ.

ತತ್ತ್ವಸೃಷ್ಟಿ ಈ ಗುಂಪಿನೊಳಗಿನ ಕವನಗಳು ಹೆಚ್ಚಾಗಿ ಒಳಗಿನ ಆಂತರಿಕ ಜೀವನದಿಂದ ಬಂದವುಗಳು.

೩೪ 'ಹಂಸದ ಹಾಡು' ನಮ್ಮ ಶ್ವಾಸದ ಧ್ವನಿತಾರ್ಥ ಅಥವಾ ಅದರ ದಿವ್ಯಧ್ವನಿ.

೩೫ 'ಬದುಕು ಮಾಯೆಯ ಮಾಟ' ಒಂದು ಮೌನ ವಾರದ ಭಾವಸಂಪತ್ತಿ.

೩೬ 'ಜಿಜ್ಞಾಸೆ'ಯು ಮಾನವಜೀವನಕ್ಕೇ ಜ್ಞಾನಸೇತುವೆ ಕಟ್ಟಿ ಅದನ್ನೇ ಹನುಮನ ಹಾರಿಕೆಯಿಂದ ಲಂಘಿಸುವಂಥ ಸಾಹಸ ಮಾಡುತ್ತಿದೆ.

೩೭ 'ಜೋಗಿ'ಯ ಗೀತ ಧಾರವಾಡದ ಸುತ್ತಲಿನ ನಿಸರ್ಗದ ಮಾಯೆಯಿಂದಲೂ ಒಳ ಜೀವನದೊಳಗಿನ ಕಾಳರಾತ್ರಿಯ ಭಯಾನಕ ಸಂಶಯಾಕುಲಿತ ಭಾವನೆಯಿಂದಲೂ ಉದಿತವಾಗಿದೆ.

೩೮ ಸಾಧನಕೇರಿಯ ನಮ್ಮ ಅಂಗಳದಲ್ಲಿ ಮಲ್ಲಿಗೆಯ ಪೊದೆಗಳಿದ್ದವು. ಅದರ ಬದಿಬದಿಗೆ ಮಾವಿನ ಮರಗಳು. ವಸಂತಕಾಲದಲ್ಲಿ ಸಾಮಾನ್ಯವಾಗಿ ರಾತ್ರಿಯಲ್ಲಿಯೇ ಹೂವು ತೆಗೆದಿಡುವ ವಾಡಿಕೆ. ಒಂದು ದಿನ ಅವುಗಳನ್ನು ಹಾಗೆಯೇ ಬಿಟ್ಟು ಬೆಳುದಿಂಗಳಲ್ಲಿ ಅವುಗಳ ಬಿಳಿಬಣ್ಣದ ಸೌಭಾಗ್ಯ ಕಂಡುಂಡು ನಸುಕು ಬೆಳಗಿನಲ್ಲಿ ಕುಯ್ಯಬೇಕೆಂದು ಮಾಡಿದ ನಿಶ್ಚಯದ ನಿಮಿತ್ತಮಾತ್ರದಿಂದ ಪ್ರಣಯಗೀತದಂತೆ ಬಂದ 'ಮಲ್ಲಿಗೆ' ಎಂಬ ಈ ಕವನ, ತಲೆದೋರಿತು. ಇದು ದವನ-ಕವನಗಳ ಮಾಲೆಗೂ ಸೇರಬೇಕಾದುದೇ.

೩೯-೪೦ 'ಹೂವೆ' 'ನಸುಕು ಬಂತು' ಇವೂ ದವನ-ಕವನಗಳ ಮಾಲೆಗೇ ಸೇರಬೇಕಾದ ಸ್ಫುಟಭಾವದ ಕವನಗಳು.

೪೧ 'ಮೌನದ ಸುನೀತ' ಒಂದು ಮೌನವಾರದ ಫಲ.

ಕೊನೆಯ ಗುಂಪಿಗೆ 'ಅನುಭಾವಗೀತಗಳು' ಎಂದು ಕರೆದದ್ದಾಗಿದೆ. ಅವೂ ಒಂದು ಒಳ ಎಚ್ಚರದಲ್ಲಿ ಹೊಳೆದ ದೃಷ್ಟಾಂತಗಳಿಂದ ಬರೆದವುಗಳು. ಅನುಭವಗೀತಗಳೆಂದರೂ ಸಲ್ಲಬಹುದು.

೪೨-೪೩-೪೪-೪೫ ಇವುಗಳ ಗುಂಪೇ ಬೇರೆ.

೪೬ 'ಲಲಿತೆ' ಎಂಬುದು ಒಂದು ಮೌನವಾರದೊಳಗಿನ ಪ್ರಾರ್ಥನೆ.

೪೭ 'ಏಲಾಗೀತ'ವು ಏಳಾ ಜಾತಿಯನ್ನು ಕುರಿತು ಮಾಡಿದ ಧ್ಯಾನದಿಂದ ಉತ್ಪನ್ನವಾದುದು.

೪೮ 'ತುಂಬಿ' ಎಂಬ ಮುಕ್ತಾಯದ ಕವನದಲ್ಲಿ ಉಪನಿಷತ್ತಿನಲ್ಲಿ 'ಪೂರ್ಣಮಿದಂ ಪೂರ್ಣಮದಃ' ಎಂಬ ಪ್ರಾರ್ಥನೆಯ ಅನುಭವಘೋಷವಿದೆ.

# ತಿದ್ದುಪಡೆ . . .

| | ತಪ್ಪು | ಪುಟ | ಸಾಲು | ಒಪ್ಪು |
|---|---|---|---|---|
| ೧ | ಲೇಸುಸರಿ | ೩ | ೪ | ಲೇಸುಸರಿ, |
| ೨ | ಬೆಳಗು | ೭ | ತಲೆಕಟ್ಟು | ಗಂಗಾವತರಣ |
| ೩ | ಕುಡೋಣು | ೨೨ | ೧೧ | ಕೂಡೋಣ |
| ೪ | ಒಹೊ | ೨೩ | ೧೧ | ಓಹೊ |
| ೫ | ಬಾಗಿವೆ | ೨೬ | ೨ | ಬಾಗಿರೆ |
| ೬ | ಚಂದ್ರನೋರೆ | ೨೬ | ೪ | ಚಂದ್ರನೋರೆ. |
| ೭ | ಮುದ್ದು | ೨೭ | ೧೦ | ಮುದ್ದು, |
| ೮ | ಇದು; | ೨೭ | ೧೧ | ಇದು |
| ೯ | ಉದ್ದು | ೨೭ | ೧೨ | ಉದ್ದು; |
| ೧೦ | ಅಲ್ಲಿಲ್ಲs | ೨೭ | ೧೫ | ಅಲ್ಲಿಲ್ಲ. |
| ೧೧ | ಕುಣಿದೆಯು | ೨೮ | ೨ | ಕುಣಿದೆಯೊ |
| ೧೨ | ಜೇಡಬಲೆಯುಲಿ | ೨೮ | ೧೦ | ಜೇಡ-ಬಲೆಯುಲಿ |
| ೧೩ | ಜೀವನಾದಕೆ | ೨೯ | ೧೦ | ಜೀವ-ನಾದಕೆ |
| ೧೪ | ಕೂಸ | ೩೧ | ೭ | ಕೂಸು |
| ೧೫ | ಮುಕ್ಕೆ | ೩೭ | ೧೮ | ಮುಕ್ಕಿ |
| ೧೬ | ಶಾ ಮಶೀಮಾ | ೩೮ | ೧೦ | ಶ್ಯಾಮಸೀಮಾ |
| ೧೭ | ಪುಲಗಿ:ಯು | ೩೯ | ೧೦ | ಪುಲಗಿರಿ |
| ೧೮ | ಒಂದೇ ಮನವೂ, | ೪೪ | ೫ | ಮನವೂ |
| ೧೯ | ನಡೆದಿದೆ | ೪೮ | ೧೨ | ನಡೆದಿರೆ |
| ೨೦ | ಮುಂದಕೆ | ೫೫ | ೫ | ಮುಂದಕ್ಕೆ |
| ೨ | ಇಲ್ಲಿಂದಲೋ | ೫೫ | ೯ | ಎಲ್ಲಿಂದಲೋ |
| ೨೨ | ಇಲ್ಲಿಂದಲೊ | ೫೫ | ೧೦ | ಅಲ್ಲಿಂದಲೋ |
| ೨೩ | ಚೀಲವೊ | ೫೬ | ೬ | ಬೇಲವೂ |
| ೨೪ | ಎಲ್ಲಿ ಇಲ್ಲಿ, | ೫೯ | ೪ | ಎಲ್ಲ ಇಲ್ಲ, |
| ೨೫ | ಲೀಸಿ | ೬೪ | ೪ | ಈಸಿ |

## ಭಾವ-ಸಂದರ್ಭ-ಸೂಚನೆ

| | ತಪ್ಪು | ಪುಟ | ಸಾಲು | ಒಪ್ಪು |
|---|---|---|---|---|
| ೨೬ | ತನ್ನತಾನೆ | ೬೪ | ೬ | ಆಹಾ ಚೆಲುವೆ |
| ೨೭ | ಆ ಅಗಾಧ. | ೬೪ | ೧೦ | ಆಹಾ ಚೆಲುವೆ. |
| ೨೮ | ತಿಳಿವೆ | ೬ | ೧೪ | ಆಹಾ ಚೆಲುವೆ |
| ೨೯ | ಬುಡಕs | ೭೦ | ೧೫ | ಬುಡsಕ |
| ೩೦ | ದಡsಕ | ೭೦ | ೧೬ | ದಡಕs |
| ೩೧ | ಭರತಖಂಡ | ೭೩ | ೧ | ಭರತಖಂಡವ |
| ೩೨ | ಅದರೆತ್ತರ ಕುಳಿದಿತು | ೭೫ | ೧೬ | ಅದರೆತ್ತರಕುಳಿದಿತು |
| ೩೩ | ಮೋರೆವರೆಯುತ | ೮೩ | ೧೮ | ಮೋರೆವರೆಯುತ |
| ೩೪ | ಮಾಡಿಸಿ | ೮೫ | ೨೦ | ಮಾಡಿಸಿ |
| ೩೫ | ಹರಿವಾಳ | ೮೭ | ೧೪ | ಪಾರಿವಾಳ |
| ೩೬ | ಕೂಗತsದ | ೮೮ | ೩ | ಕೂಗತದ |
| ೩೭ | ಕುಹೂಕ್ಕುಹೂ | ೮೮ | ೮ | ಕುಹೂಕ್ಕುಹೂ |
| ೩೮ | ಹೋಗಿ | ೮೮ | ೧೦ | ಹೋಗಿ ? |
| ೩೯ | ಆಕೆ | ೯೪ | ೧೨ | ಆಕೆ; |
| ೪೦ | ಕೂಸುಮಾತಿಗೆ | ೯೪ | ೧೩ | ಕೂಸು-ಮಾತಿಗೆ |
| ೪೧ | ಅಗ್ನಿಸೂಕ್ತಿ | ೯೯ | ತಲೆಕಟ್ಟು | ಅಗ್ನಿಸೂಕ್ತ |
| ೪೨ | ಮಾನ | ೧೦೫ | ೧೧ | ಮೌನ |
| ೪೩ | ತಮ್ಮಾ | ೧೦೬ | ೯ | ಅಮ್ಮಾ |
| ೪೪ | ಕೂಡಿ | ೧೦೬ | ೧೫ | ಮಾಡಿ |
| ೪೫ | ಎಲೆನಗೆ | ೧೦೮ | ೧೨ | ಎಲೆನನೆ |